# ಸಿದ್ಧಗಂಗಾ

ಪುಟ-28. ಸಂಚಿಕೆ-8. ಆಗಸ್ಟ್-1992.

## -: 46ನೇ ಸ್ವಾತಂತ್ರ್ಯೋತ್ಸವದ ಸಂದೇಶ :-

ಮನು ಕುಲಕ್ಕೆ ಭಾರತ ನೀಡಿರುವ ಕೊಡುಗೆ ಅಪಾರ. ಈ ಹಿನ್ನೆಲೆಯ ಾರದಿಂದ ಬ್ರಿಟಿಷರ ವಿರುದ್ಧ ಮಹಾತ್ಮ ಗಾಂಧಿಯವರು ಬಳಸಿದ ಸ್ತ್ರಗಳೆಂದರೆ ಸತ್ಯ, ಅಹಿಂಸೆ, ನ್ಯಾಯ, ನೀತಿ, ಧರ್ಮ. ಕೇವಲ ತಿಕ ಸಂಪತ್ತಿನ ಬೆಳವಣಿಗೆಯೇ ರಾಷ್ಟ್ರದ ಅಳತೆಗೋಲಲ್ಲ. ಹೃದಯ ಮಂತಿಕೆ, ಅನುಕಂಪ, ನೀತಿಯುತವಾದ ಲಕ್ಷಣಗಳು. ಸ್ವಾತಂತ್ರ್ಯಪಡೆದು ವರ್ಷಗಳು ಕಳೆದರೂ ಇನ್ನೂ ಭಾರತದಲ್ಲಿ 23 ಕೋಟಿ ಜನ ಬಡತನ ಖೆಯ ಕೆಳಗೆ ಜೀವಿಸುತ್ತಿದ್ದಾರೆ. ಈ ಭೀಕರ ಬಡತನಕ್ಕೆ ಮುಖಂಡರ ರ್ಥವೇ ಮುಖ್ಯ ಕಾರಣ.

ನಿಜವಾದ ಪ್ರಜಾಪ್ರಭುತ್ವವೆಂದರೆ ಸರ್ವರ ಪ್ರಗತಿ, ಸರ್ವರಿಂದಾಗಬೇಕು. ದ್ಧಾನಿಷ್ಠೆಯಿಂದ ಎಲ್ಲರೂ ತಮ್ಮ ತಮ್ಮ ಸ್ಥಾನಗಳಲ್ಲಿ ಪ್ರಾಮಾಣಿಕವಾಗಿ ಲಸಮಾಡಲು ಈ ಐತಿಹಾಸಿಕ ಸ್ವಾತಂತ್ರ್ಯೋತ್ಸವ ದಿನದಂದು ಸಂಕಲ್ಪ ಾಡಬೇಕಾಗಿದೆ.

—ಶ್ರೀ ಶ್ರೀ ಶಿವಕುಮಾರಸ್ವಾಮಿಗಳು

ಪ್ರಕಾಶಕರು:
ಹಳೆಯ ವಿದ್ಯಾರ್ಥಿಗಳ ಸಂಘ
ಸಿದ್ಧಗಂಗಾ ಕ್ಷೇತ್ರ.

"ಭಾರತದ ಜೀವಾಳ ಹಳ್ಳಿಗಳು, ಪಟ್ಟಣಗಳಲ್ಲ. ಹಳ್ಳಿಗರ ಬಡತನ ನಿರ್ಮೂಲನೆಗೊಳಿಸಿದ ದಿನವೇ ಸ್ವರಾಜ್ಯ ದೊರೆತ ದಿನ."

-ಮಹಾತ್ಮಗಾಂಧೀಜಿ

## ಸಮೃದ್ಧ ಬದುಕಿಗೆ ಸಮಗ್ರ ಕಾರ್ಯಕ್ರಮಗಳು

ಭಾರತ ಸ್ವಾತಂತ್ರ್ಯಗಳಿಸಿದ 45 ವರ್ಷಗಳ ನಂತರವೂ ಮಹಾತ್ಮಗಾಂಧೀಜಿಯವರ ಭವ್ಯ ಭಾವನೆಗಳು ನಮಗೆ ಸತತ ಸ್ಫೂರ್ತಿ ಮತ್ತು ಪ್ರೇರಣೆಯನ್ನು ನೀಡುತ್ತಿವೆ. ಮಹಾತ್ಮಗಾಂಧೀಜಿಯವರ ಕನಸಿನ ಭಾರತವೆಂದರೆ; ಅದು "ಪರಸ್ಪರ ಸ್ವಾವಲಂಬಿಯಾದ ಸ್ವತಂತ್ರ ಪ್ರಜಾರಾಜ್ಯ" ಎಂಬುದು ನಮಗೆಲ್ಲ ಮನದಟ್ಟಾಗಿದೆ. ಇದನ್ನರಿತೇ 1991ರ ಅಕ್ಟೋಬರ್ 2ರಂದು ಕರ್ನಾಟಕ ಸರ್ಕಾರ "ವಿಶ್ವ" ಎಂಬ ವಿನೂತನ ಯೋಜನೆಯನ್ನು ರಾಜ್ಯದಲ್ಲಿ ಅನುಷ್ಠಾನಕ್ಕೆ ತಂದಿದೆ. ಗ್ರಾಮೀಣ ಪ್ರದೇಶದ ಗುಡಿ ಕೈಗಾರಿಕೆಗಳಿಗೆ ಉತ್ತೇಜನ ನೀಡುವ ಮೂಲಕ ಗ್ರಾಮೀಣ ಅಭಿವೃದ್ಧಿಗೆ ನೆರವಾಗುವ "ವಿಶ್ವ" ಗ್ರಾಮೀಣ ಬಂಧುಗಳಿಗೆ ಸ್ಥಳೀಯವಾಗಿಯೇ ಉದ್ಯೋಗ ಕಲ್ಪಿಸಿ ಅವರು ಪಟ್ಟಣಗಳಿಗೆ ವಲಸೆ ಹೋಗುವುದನ್ನು ತಪ್ಪಿಸುವ ಗುರಿ ಹೊಂದಿದೆ. ಈ ದಿಶೆಯಲ್ಲಿ ಸರ್ಕಾರ ಗ್ರಾಮೀಣ ಯುವಕರಿಗೆ ತಮ್ಮ ಪರಂಪರಾಗತ ಕಸುಬು ಮತ್ತು ಕುಶಲಕಲೆಯಲ್ಲಿ ತರಬೇತಿ ನೀಡುವುದು, ಉತ್ಪಾದಿಸಿದ ವಸ್ತುಗಳಿಗೆ ಮಾರುಕಟ್ಟೆ ಸೌಲಭ್ಯ ಕಲ್ಪಿಸುವುದು ಹಾಗೂ ಅಂತಹ ಕಸುಬುಗಳನ್ನು ಕೈಗೊಳ್ಳಲು ಅಗತ್ಯವಾದ ಹಣಕಾಸಿನ ನೆರವು ಮತ್ತು ಇತರ ಪೂರಕ ಸೌಲಭ್ಯಗಳನ್ನು ಒದಗಿಸುವ ಕಾರ್ಯವನ್ನು ವ್ಯಾಪಕವಾಗಿ ಕೈಗೊಂಡಿದೆ. ನಮ್ಮ ಗ್ರಾಮಗಳು ಸ್ವಾವಲಂಬಿಯಾಗಬೇಕು. ತನ್ಮೂಲಕ ಮಹಾತ್ಮಗಾಂಧೀಜಿಯವರ ಬಲಿಷ್ಠ ಭಾರತ ನಿರ್ಮಾಣದ ಕಲ್ಪನೆಯನ್ನು ಸಾಕಾರಗೊಳಿಸಬೇಕು ಎಂಬುದೇ "ವಿಶ್ವ" ಯೋಜನೆಯ ಪರಮ ಗುರಿ.

## ಕಲಿಯಲು ಮುಕ್ತ ಅವಕಾಶ

ಗ್ರಾಮೀಣ ಪ್ರದೇಶದ ಬಡವರ್ಗದ ಮಕ್ಕಳು ಶಾಲೆಗಳಿಗೆ ಕ್ರಮವಾಗಿ ಹಾಜರಾಗಿ ಕಲಿಯಲು ಅನುಕೂಲವಾಗುವಂತೆ ನಗದು ಹಣ ನೀಡಿಕೆಯ ಮೂಲಕ ಪ್ರೋತ್ಸಾಹ ತುಂಬುವ "ಅಕ್ಷಯ" ಯೋಜನೆಯಿಂದ ರಾಜ್ಯದ 30ಲಕ್ಷ ಮಕ್ಕಳ ಶಿಕ್ಷಣಕ್ಕೆ ಮುಕ್ತ ಅವಕಾಶ ದೊರೆತಿದೆ.

## ಸ್ವಸ್ಥ ಜೀವನಕ್ಕೆ ನೆರವು

ರಾಜ್ಯದ ಅದರಲ್ಲೂ ಗ್ರಾಮೀಣ ಪ್ರದೇಶದ ಜನರಿಗೆ ಆರೋಗ್ಯ ಜೀವನ ನೀಡುವ "ಶುಶ್ರೂಷೆ" ಒಂದು ಮಾದರಿ ಯೋಜನೆ. ಒಂದು ಕೋಟಿ ರೂಪಾಯಿ ವೆಚ್ಚದ ಈ ಕಾರ್ಯಕ್ರಮದಂತೆ ಎಲ್ಲ ನಾಗರೀಕರಿಗೂ ವರ್ಷಕ್ಕೆ ಎರಡುಸಲ ಪುಕ್ಕಟೆ ವೈದ್ಯಕೀಯ ತಪಾಸಣೆಯ ಸೌಲಭ್ಯವಿದೆ. ಇದಲ್ಲದೆ ಸರ್ಕಾರ ರಾಜ್ಯದ ಎಲ್ಲ ಜಿಲ್ಲೆಗಳಲ್ಲೂ ಸಾರ್ವತ್ರಿಕ ರೋಗ ನಿರೋಧಕ ಲಸಿಕೆ ಕಾರ್ಯಕ್ರಮವನ್ನು ಕೈಗೆತ್ತಿಕೊಂಡಿದೆ.

(3ನೇ ರಕ್ಷಾಪುಟ ನೋಡಿ)

# ಸಿದ್ಧಗಂಗಾ

ಸಂಪುಟ - 28.    ಸಂಚಿಕೆ -8 .    ಆಗಸ್ಟ್ - 1992.

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಕಂಡು ಅರಿಯರುನಿನ್ನ  ಕೇಳಿ ಅರಿಯರುನಿನ್ನ
ಭಂಡವೂಾನವರು ಜಗದೊಳಗೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

××    ××    ××

ಲೋಕಜಾಲಿಯ ಬನದಿ ಚಂದನದತರುವಾದೆ
ನಾಕು ದಿಕ್ಕಿಗು ಕಂಪನ್ನರಡಿದೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

××    ××    ××

ಕಾಯಕ ಶ್ರೀಲಿಂಗ ದಾಸೋಹ ಶ್ರೀಲಿಂಗ
ಮಾನವ್ಯ ಮಹಾಮೇರು ಲಿಂಗವೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು. ॥

‡‡    ‡‡    ‡‡

—ಹೆಚ್. ವಿ. ವೀರಭದ್ರಯ್ಯ.



# ಶ್ರೀ ವಾಣಿ

## ಬ್ರಹ್ಮಲಿಪಿ ಕಾಣಬಾರದು.

ಮೈಸೂರಿನ ಪಂಚಗವಿ ಮಠಾಧ್ಯಕ್ಷರಾಗಿದ್ದ ಪೂಜ್ಯ ಶ್ರೀ ಗೌರೀಶಂಕರಸ್ವಾಮಿಗಳು ಪ್ರಾತಃ ಸ್ಮರಣೀಯರು, ಪರಿಶುದ್ಧ ಶಿವಾನುಭವಿಗಳು, ಪ್ರಕಾಂಡ ಪಂಡಿತರು, ನಿರ್ಮಲಾಂತಃಕರಣರು, ಸಮಾಜಕ್ಕೆ ಮುತ್ತಿಂದ್ದಂತೆ ಶೋಭಿಸುತ್ತಿದ್ದರು ಬಹುಭಾಷಾವಿದರು. ಬಹುಮುಖಪ್ರತಿಭೆಯುಳ್ಳವರು. ವಚನಸಾಹಿತ್ಯದ ಆಳ-ಅಂಗುಲಗಳನ್ನು ತಲಸ್ಪರ್ಶಿಯಾಗಿ ಕಂಡವರು. ಪ್ರವಚನಕ್ಕೆ ಪ್ರಾರಂಭಿಸಿದರೆ ಪಂಡಿತ ಪಾಮರರಿಬ್ಬರೂ ತಲೆದೂಗುವಂತೆ ಪ್ರಸಾದವಾಣಿಯನ್ನು ನೀಡುತ್ತಿದ್ದ ವಿಭೂತಿಪುರುಷರು. ಪ್ರವಚನ ಸರಳಸುಂದರವಾಗಿಯೂ ಮೂಡಿಬರುತ್ತಿದ್ದಂತೆ, ಪ್ರೌಢಪಾಂಡಿತ್ಯ ಶ್ರೀಯಿಂದ ಮೈದುಂಬಿಯೂ ಹೊರಹೊಮ್ಮುತ್ತಿದ್ದಿತು. ಒಂದು ಸಲ ಪೂಜ್ಯರು ಪ್ರವಚನನೀಡಿದ ಸಂದರ್ಭದಲ್ಲಿ ಮುಗ್ಧ ತರುಣನೊಬ್ಬನಿಂದ ಒಂದು ಪ್ರಶ್ನೆಯನ್ನು ಎದುರಿಸಬೇಕಾಯಿತು. ತರುಣನ ಪ್ರಶ್ನೆ ತುಂಬಾ ಸರಳವಾಗಿತ್ತು, ಆದರೆ ಸಹಜವಾಗಿತ್ತು. ಶ್ರೀ ಗೌರೀಶಂಕರಸ್ವಾಮಿಗಳು ಹಣೆಯ ಮೇಲೆ ವಿಭೂತಿಧಾರಣೆ ಮಾಡುವಾಗ ಹಣೆಯ ತುಂಬಾ ಧರಿಸುತ್ತಿದ್ದರು. ಮಧ್ಯೆಸ್ವಲ್ಪವೂಹಣೆಯ ಭಾಗ ಕಾಣುತ್ತಿರಲಿಲ್ಲ. ಸಾಮಾನ್ಯವಾಗಿ ಎಲ್ಲರೂ ಧರಿಸುವುದು ಮೂರುಎಳೆಗಳು ಸ್ಪಷ್ಟವಾಗಿ ಕಾಣುವಂತೆ ಬಿಡಿ ಬಿಡಿಯಾಗಿ ಧರಿಸುವುದು ವಾಡಿಕೆ. ಅದನ್ನು ಕುರಿತೇ ಆ ತರುಣ ಕೇಳಿದ್ದ, "ಸ್ವಾಮೀಜಿ ಎಲ್ಲರೂ ವಿಭೂತಿಯನ್ನು ಮೂರುಬೆರಳಿಂದ ಮೂರುಎಳೆಗಳು ಕಾಣುವಂತೆ ಧರಿಸುತ್ತಾರಲ್ಲ? ಮತ್ತೆ ತಾವೇಕೆ ಹಣೆಯತುಂಬಾ ಧರಿಸಿದ್ದೀರಿ"- ಎಂಬುದಾಗಿ ತಕ್ಷಣವೇ ಸಿದ್ಧವಾಗಿತ್ತು ಶ್ರೀ ಶ್ರೀಗಳವರ ಮಿಂಚಿನಂಥಉತ್ತರ "ನೋಡಪ್ಪಾ ಬ್ರಹ್ಮಬರೆದಲಿಪಿ ಯಾರಿಗೂ ಕಾಣಬಾರದು ಎಂಬದೃಷ್ಟಿಯಿಂದ ಹಣೆತುಂಬಾ ಭಸ್ಮಧಾರಣೆ ಮಾಡಿದ್ದೇನೆ"- ಎಂದರು. ಎಲ್ಲ ಅಪ್ರತಿಭರಾದರು. ಏನು ಉತ್ತರ ಬರಬಹುದೆಂದು ಕುತೂಹಲವಾಗಿ ನಿರೀಕ್ಷಿಸುತ್ತಿದ್ದರೋ ಅಲ್ಲಿದ್ದವರೆಲ್ಲ ಮೂಕವಿಸ್ಮಿತರಾದರು. ತರುಣನಂತೂ ಕಣ್ಣರಳಿಸಿಕೊಂಡು ನೋಡುತ್ತ ನಿಂತುಬಿಟ್ಟ. ಶ್ರೀ ಶ್ರೀಗಳವರದು ಮೇಲ್ಮಟ್ಟದ ಹಾಸ್ಯವಾಗಿತ್ತು. ಬೌದ್ಧಿಕ ವಾಣಿಯಾಗಿತ್ತು, ಶಿವಯೋಗಿಯನುಡಿ ಲಿಂಗನುಡಿಯಾಗಿ ಕಂಗೊಳಿಸಿತ್ತು.

#  ನಾಗರ ಚೌತಿ 

ಆಸ್ಥಾನ ವಿದ್ವಾನ್ ಡಾ|| ಬಸವರಾಜ ಶಾಸ್ತ್ರಿಗಳು, ಬೃಹನ್ಮಠ, ಬಳ್ಳಾರಿ-3.

ಶ್ರಾವಣ ಮಾಸದಲಿ ಬರುವುದು।
ಭಾವಿಹಬ್ಬವ ಸೂಚಿಸುವುದಿದು
ಭಾವಬೆಳಗುತ ಬಾಲರೆಲ್ಲರ।
ನೋವು ಕಳೆದು ನಲಿವುದು ।೧।।

ಶುದ್ಧ ಚೌತಿಯ ದಿನದಲಂದು।
ಎದ್ದು ಮಿಂದೂ ಮಡಿಯನುಟ್ಟು
ಶುದ್ಧ ಮಾನಸದಿಂದ ಮಕ್ಕಳು ।
ಮುದ್ದು ಮುಖದಿ ಮೆರೆವರು ।೨।।

ತಿಂಡಿತಿನಿಸುಗಳೆಷ್ಟೊ ಬಗೆಯಲಿ।
ಉಂಡೆಯವು ಹನ್ನೆರಡು ತೆರದಲಿ ।
ಉಂಡು ತೇಗುತಲಿಹರು ಮಕ್ಕಳು ।
ಕಂಡ ಕಂಡ ಕಡೆಯಲಿ ।।೩।।

ಶಿವನಿಗೇ ಆಭರಣ ನಾಗನು ।
ಭುವನರಕ್ಷಕ ವಿಷ್ಣುವಿಗೆಯೂ ।
ಸವೆಯದಾ ಹಾಸಿಗೆಯಾಗಿಹ ।
ಶಿವಕುಮಾರನ ಹೊಟ್ಟೆಗೆ ।।೪।।

ಹರನ ಸುತೆ ಮಾನಸಿಕೆಯವಳು ।
ಭರತಖಂಡದಿ ನಾಗಜನರು ।
ವರ ಉಲೂಪಿ ಚಿತ್ರರಂಗದೇ ।
ಪರಿಪರಿ ನಾಗಿಣಿಯರು ।।೫।।

ರೊಟ್ಟಿ ಹಬ್ಬವು ತದಿಗಿದಿನದಲಿ ।
ಕಟ್ಟಿದುಂಡೆ ಹಬ್ಬ ಚೌತಿಯು ।
ನೆಟ್ಟನೆ ಕಾಯ್‌ಕಡುಬು ಹಬ್ಬವು ।
ಪುಟ್ಟಮಕ್ಕಳೆ ಪಂಚಮಿ ।।೬।।

ಮಳೆಬೆಳೆಯಿಂ ಭೂಮಿನಲಿವುದು ।
ಇಳೆಯಜನರಲಿ ಇಹುದುಹರ್ಷವು ।
ಕಲೆಯಕಾಂತಿಯ ಕಾಣುತಿರುವುದು।
ನಳನಳಿಸಿ ಧರಣಿಯು ।।೭।।

ನಾಗಪೂಜೆಯ ಫಲವ ಕೇಳಿರಿ ।
ಬೇಗ ಭೀತಿ ನಿವಾರಿಸುವುದು ।
ಆಗದೆಂದಿಗು ಮತ್ತ್ಯುಜವದಲಿ ।
ಭೋಗಿಯೊಲಿಮೆಯದಾಗಲು ।।೮।।

ತಕ್ಷಕನ ಪೀಡಿಸೆ ಪರೀಕ್ಷಕ ।
ಶಿಕ್ಷೆಯನು ತಾನನುಭವಿಸಲಿಕೆ ।
ತಕ್ಷಣ ದಿಶಮಿಾಕ ಋಷಿಗೆಯು ।
ತಕ್ಷಕ ಶವಕೊರಳಿಗೆ ।।೯।।

ಶಮಿಾಕನಮಗ ಶೃಂಗಿಯವನು ।
ಸಮಯದೊಳು ಬಂದುಶಪಿಸೆನೋಡಿ ।
ಸಮಯವೇಳು ದಿನಗಳಲಿಸಾವು ।
ಆ ಮುನಿಯು ಆಸ್ತಿಕನು ।।೧೦।।

ಸುತನು ಜನಮೇಜಯನು ಸರ್ಪಗಳ ।
ಸತತಯಾಗವ ಮಾಡೆ ತಕ್ಷ ।
ನುತಸಲಿಂದ ನರಕ್ಷಕೆಯವನು ।
ಜತನದಲಿ ಇಂದ್ರಸಹ ।।೧೧।।

ಎನ್ನಲಾಗಲೆ ಆಸ್ತಿಕನಿಂದ ।
ಮುನ್ನ ಉಳಿದೆವಲಾ ಎನುತಲವು ।
ಬನ್ನರಕ್ಷಕ ನಾಸ್ತಿಕಗೆ ಋಣಿ ।
ಎನ್ನೆ ಆಸ್ತಿಕ ಅಭಯವು ।।೧೨।।

ಅಂದಿನಿಂ ಮೊದಲಾಯ್ತು ಪೂಜೆಯು ।
ಇಂದಿನಾವರೆಗೆ ನಡೆವುದಿದು ।
ನಂದದಿಂದಲಿ ಮಾಡಿ ನಲಿಯಿರಿ ।
ಅಂದ ಚಂದದ ಮಕ್ಕಳೆ ! ।।೧೩।।

# ಸಂಪಾದಕೀಯ

**ಸ್ವಾತಂತ್ರ್ಯ ದಿನಾಚರಣೆ.**

ಆಗಸ್ಟ್ ಹದಿನೈದು ಮಹತ್ವಪೂರ್ಣವಾದ ದಿನ. ಭಾರತೀಯರು ಜಾಗತಿಕ ಜೀವನದಲ್ಲಿ ಸ್ವತಂತ್ರರಾಗಿ ಬಾಳುವ ಅವಕಾಶವನ್ನು ಪಡೆದುಕೊಂಡದಿನ. ದೇಶ ಭಕ್ತರ ಅವಿರತ ಶ್ರಮದ ಹೋರಾಟದ ಫಲವಾಗಿ ಮೂಡಿ ಬಂದದಿನ 1947ರ ಆಗಸ್ಟ್ ಹದಿನೈದು ಮತ್ತೆ ಮತ್ತೆ ನೆನಪಾಗುತ್ತಿರುವದಿನ. ಸಹಸ್ರ ಸಹಸ್ರ ಬಣ್ಣಗಳ ಕನಸನ್ನು ಕಟ್ಟಿಕೊಂಡು ಕಣ್ತೆರೆದದ್ದು ಅಂದು. ಭರತಖಂಡದ ಬದುಕು ಭಾಗ್ಯವಂತವಾಗುವಂಥ ಯೋಜನೆಗಳಿಗೆ ದುಡಿದದ್ದು. ಆನಂತರ ಬಂದ ಆಗಸ್ಟ್ ಹದಿನೈದರಂದು ಅವಲೋಕನ ಮಾಡಿಕೊಳ್ಳುತ್ತ ದಾರಿ ನಡೆದದ್ದೇ ನಡೆದದ್ದು, ನಮ್ಮ ಜನನಾಯುಕರು ಜೀವನ ವಿಧಾನವನ್ನು ಕಂಡುಂಡ ಶ್ರೀಸಾಮಾನ್ಯನಿಂದು ಭ್ರಮನಿರಸನಗೊಂಡಿದ್ದಾನೆ. ಪ್ರಜಾಸೇವಕರೆಂದು ಹೇಳಿಕೊಳ್ಳುತ್ತಲೇ ಯಾವ ಚಕ್ರವರ್ತಿ ರಾಜ ಮಹಾರಾಜರುಗಳಿಗೆ ಕಡಿಮೆಯಿಲ್ಲದಂತೆ ಅತ್ಯಂತ ವೈಭವೋಪೇತ ಜೀವನ ನಡೆಸುತ್ತಿರುವ ನಮ್ಮ ನಾಯಕರು ದೇಶವನ್ನು ಸಾಲದಮಹಾ ದಾಸ್ಯಕ್ಕೆ ತಳ್ಳುತ್ತಿರುವುದೇನೂಸುಳ್ಳಲ್ಲ ಹಾಡು ಹಗಲೇ ರಾಜಕೀಯ ಭ್ರಷ್ಟಾಚಾರ ಜೀವನದ ಹೆದ್ದಾರಿಯಾಗಿ ಮಾರ್ಪಟ್ಟಿದೆ. ತೆರೆಯಮರೆಯಲ್ಲಿ ನಡೆದು ಕೊಳ್ಳುವ ಅವ್ಯವಹಾರಗಳಿಗೂ ತೆರೆಯಮುಂದೆ ಅನುಸರಿಸುತ್ತಿರುವ ನಾಜೂಕಿನ ವಿದ್ಯಮಾನಗಳಿಗೂ ವ್ಯಂಗ್ಯಪ್ರಹಸನವೇ ಅಭಿನಯವಾದಂತಿದೆ. ರಾಜಕೀಯ ಸ್ವಾತಂತ್ರ್ಯ ನಮ್ಮದಾಗಿದೆಯಾದರೂ ಮಾನಸಿಕ, ಸಾಂಸ್ಕೃತಿಕ ಸ್ವಾತಂತ್ರ್ಯ ಭಾರತೀಯನಿಗೆ ಲಭ್ಯವಾಗಿದೆಯೇ ? ಪ್ರಶ್ನಿಸುವಂತಾಗಿದೆ. ಯುವಪೀಳಿಗೆ ದಿಕ್ಕುಕಾಣದೆ ತತ್ತರಿಸುತ್ತಿದೆ. ನಿಟ್ಟುಸಿರು ಬಿಡುತ್ತಿದೆ. ರೂಪಿಸಿದ ಯೋಜನೆಗಳೆಲ್ಲ ಪೂರ್ಣವಾಗಿಲ್ಲ. ರಾಜಕೀಯ ಮುಖಂಡರ ಸ್ವಾರ್ಥಕ್ಕಾಗಿ ಹಲವು ಸಮಸ್ಯೆಗಳ ಸೃಷ್ಟಿಯಾಗಿವೆ. ಕಬಂಧ ಬಾಹುವಿನಂತೆ ಸಮಸ್ಯೆಗಳ ಸುಳಿಯಲ್ಲಿ ಭಾರತೀಯ ಸಿಂದು ಸಿಕ್ಕಿ ನರಳುತ್ತಿದ್ದಾನೆ ಶ್ರಮಜೀವನ ಬೇಕಾಗಿಲ್ಲ, ಪ್ರಾಮಾಣಿಕತೆ ಯಾರಿಗೆ ಬೇಕು? ದೇಶಭಕ್ತಿ ಚರಿತ್ರೆಯವಸ್ತು, ರಾಷ್ಟ್ರಪ್ರಜ್ಞೆ ಭಾಷಣದ ಮಾತು, ಜಾತ್ಯತೀತತೆ ವೋಟುಗಳಿಸುವತಂತ್ರ, "ಗಾಂಧೀಜಿ" ಮುಗ್ಧರನ್ನು ಮರುಳು ಮಾಡಲು ಬಳಸಿಕೊಳ್ಳುತ್ತಿರುವ ಹುನ್ನಾರ. ಸ್ವರಾಜ್ಯ, ಸುರಾಜ್ಯವೆಂಬ ಮಾತೆಲ್ಲ ಗಾಳಿಗುಳ್ಳೆ, ಸ್ವಾತಂತ್ರ್ಯ ದಿನಾಚರಣೆ ಶಾಲಾ ಕಾಲೇಜುಗಳ ವೇಳಾಪಟ್ಟಿಯಲ್ಲಿ ಬಂದು ಹೋಗುವ ಒಂದುದಿನ ಅಷ್ಟೆ.

ಹೇಗಿದೆ ನಮ್ಮ ಸ್ವಾತಂತ್ರ್ಯ ದಿನಾಚರಣೆ

# ಶ್ರೀ ಸಿದ್ಧಲಿಂಗೇಶ್ವರ ವಚನ



ಗಂಗಾಸ್ನಾನ ಕೋಟ್ಯನು ಕೋಟಿಗಿಂತ ವಿಭೂತಿಯ ಸ್ನಾನವಧಿಕ ನೋಡಾ
ಮಂತ್ರಸ್ನಾನ ಕೋಟ್ಯನು ಕೋಟಿಗಿಂತ ವಿಭೂತಿಯ ಸ್ನಾನವಧಿಕ ನೋಡಾ
ವಿಭೂತಿ ರೇಣುಮಾತ್ರದಿಂದ ರುದ್ರನಪ್ಪುದ ತಪ್ಪದು ನೋಡಾ
ಸರ್ವಾಂಗದಲ್ಲಿ ವಿಭೂತಿಯ ಉದ್ಧೂಳನವ ಮಾಡಿದಾತನನೇನೆಂದುಪಮಿ-
ಸುವೆನಯ್ಯಾ ಆ ಮಹಾತ್ಮನ ?
ಆತನು ಜಗತ್ಪಾವನನು ನೋಡಾ !
ಇಂತಪ್ಪ ಪವಿತ್ರಕಾಯಂಗೆ ನಮೋ ನಮೋ ಎಂಬೆನು ಕಾಣಾ !
ಆತನು ಪರಮಾತ್ಮ ಸ್ವರೂಪನಾದ ಕಾರಣ
ಆತನು ಪಂಚಬ್ರಹ್ಮ ಸ್ವರೂಪನಾದ ಕಾರಣ
ಆ ಮಹೇಶ್ವರಂಗೆ ಶರಣೆಂದು ಬದುಕಿದೆನಯ್ಯಾ
ಮಹಾಲಿಂಗಗುರು ಶಿವ ಸಿದ್ಧೇಶ್ವರ ಪ್ರಭುವೇ

ಅಂಗದ ಮೇಲೆ ಲಿಂಗಧರಿಸಿ ಲಿಂಗಪೂಜೆಯನ್ನು ಮಾಡುವ ಶಿವಭಕ್ತನಿಗೆ ವಿಭೂತಿಧಾರಣ ಮಾಡುವ ಆವಶ್ಯಕತೆಯು ವಿಶೇಷವಾಗಿರುವುದು. ವಿಭೂತಿಯು ನಿರುಪಾಧಿಕ ಸೋಪಾಧಿಕವೆಂದು ಎರಡು ವಿಧವಾಗಿರುವುದು ಜ್ಯೋತಿಸ್ವರೂಪನಾದ ಶಿವನ ತೇಜಸ್ಸೇ ನಿರುಪಾಧಿಕವೆನಿಸುವುದು. ಇದಕ್ಕೇನೇ ಚಿದ್ಭಸಿತವೆಂದು ಅನುಭವಿಗಳು ಹೇಳುವರು ಇದು ಅಂತರಸ್ನಾವರಣದಲ್ಲಿಬರುವುದು.

ಶಿವನ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ ಎಂಬ ಐದುಮುಖಗಳಿಂದ ಜನಿಸಿದ ನಂದೆ, ಭದ್ರೆ, ಸುರಭಿ, ಸುಶೀಲೆ, ಸುಮನೆ, ಎಂಬ ಗೋವುಗಳಿಂದ ಸಿದ್ಧವಾದ ವಿಭೂತಿಯೇ ಸೋಪಾಧಿಕ ಎನಿಸುವುದು. ಇವನ್ನು ಸಿದ್ಧಮಾಡುವ ವಿಧಾನವುಂಟು.

ಲಿಂಗಧಾರಿಯು ಶುದ್ಧವಾದ ಗೋಮಯದಿಂದ ಸಿದ್ಧವಾದ ಭಸ್ಮವನ್ನು ಗುರು ಪಾದೋದಕದಿಂದ ಸಂಸ್ಕಾರಗೊಳಿಸಿ ಧರಿಸಬೇಕು. ಅದರಿಂದ ಯಾವ ಲಾಭವಾಗುವುದೆಂಬುದು ಮೇಲಿನ ವಚನದಲ್ಲಿ ಸ್ಪಷ್ಟವಾಗಿರುವುದು.

## ಸಿದ್ಧಗಂಗಾ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ - 572 104

ತುಮಕೂರು ಜಿಲ್ಲೆ

ಪ್ರಧಾನ ಸಂಪಾದಕರು

**ಪ॥ ಚನ್ನಪ್ಪ ಎರೇಸೀಮೆ**

* * *

ಸಂಪಾದಕರು

**ಹೆಚ್. ವಿ. ವೀರಭದ್ರಯ್ಯ**

* * *

ಸಹಸಂಪಾದಕರು

**ಎಂ. ರೇಣುಕಾರಾಧ್ಯ**

**ಪಿ. ಎಸ್. ಚಂದ್ರಶೇಖರಯ್ಯ**

**ಬಿ. ವೀರಭದ್ರಯ್ಯ**

* * *

ಜಾಹೀರಾತುವಿಭಾಗ

**ಸಿ. ಬಿ. ಶಂಕರಪ್ಪ**

* * *

ಪ್ರಕಾಶಕರು

**ಹೆಚ್. ಬಿ. ಗಂಗಾಧರಯ್ಯ**

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು

**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ**

* * *

ಪ್ರಕಟಣೆಯ ಸ್ಥಳ

**ಶ್ರೀ ಸಿದ್ಧಗಂಗಾಕ್ಷೇತ್ರ**

### ಚಂದಾ ವಿವರ

ವಾರ್ಷಿಕ ಚಂದಾ 25-00ರೂ

ಆಜೀವ ಸದಸ್ಯತ್ವ 300-00

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ. ಮೇಲಾಗಿ ಶ್ರೀ ಮಠದ ಮುಖವಾಣಿ. ಪೂಜ್ಯ ಶ್ರೀ ಶ್ರೀ ಡಾ॥ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ ಮುನ್ನಡೆದಿರುವ ಪತ್ರಿಕೆ. ತ್ರಿವಿಧ ದಾಸೋಹ ಸೇವಾ ತತ್ಪರತೆಯಿಂದ ಹೆಜ್ಜೆ ಹಾಕುತ್ತಿದೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ. ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

" ಸಂಪಾದಕರು "

'ಸಿದ್ಧಗಂಗಾ' ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ

ತುಮಕೂರು ಜಿಲ್ಲೆ-572104.

ಇವರಿಗೆ ಕಳುಹಿಸಿಕೊಡಬೇಕಾಗಿ ಪ್ರಾರ್ಥನೆ



## —: ಶ್ರೀ ಶ್ರೀ ಶ್ರೀ ಗುರುಭಕ್ತಿ ನಿವೇದನೆ :—

ಆಂಧ್ರಪ್ರದೇಶದ ಅನಂತಪುರಜಿಲ್ಲೆ, ಹಿಂದೂಪುರದಲ್ಲಿ ದಿವಂಗತ ಕೋಳಾಲು ಗುರುನಂಜಪ್ಪನವರ ವಾರ್ಷಿಕ ಪುಣ್ಯಾರಾಧನಾ ಸ್ಮರಣಾರ್ಥ ಅವರ ಮಕ್ಕಳಾದ ಶ್ರೀ ಕೆ.ಜಿ. ನಂಜುಂಡಪ್ಪ, ವಕೀಲರು, ಶ್ರೀ ಕೆ.ಜಿ. ಸಿದ್ದಪ್ಪ, ಶ್ರೀ ಕೆ. ಜಿ. ಬಸವರಾಜು ಇವರುಗಳು ಸಿದ್ಧಗಂಗಾ ಶ್ರೀ ಶ್ರೀಗಳವರ ತುಲಾಭಾರವನ್ನು ಏರ್ಪಡಿಸಿದ್ದರು.

ಶ್ರೀ ಮೋಟಗಿ ಮಲ್ಲಿಕಾರ್ಜುನ "ಕನ್ನಡಕವಿಕಾಳಿದಾಸ" ಅಥಣಿ. (ಬೆಳಗಾವಿಜಿಲ್ಲೆ)

## ಮಾಚಿ ತಂದೆ ದರ್ಶನ. 124

"ಇಂದು ಬೆಳಗಿನಾ ಅಮೃತದ ಗಳಿಗೆಯೊಳು, ನಾನೊಂದು
ಬಲು ಸೊಗಸಿನಾ ಕನಸು ಕಂಡೆ ಕೇಳಯ್ಯ !
ಶರಣ ಬಂಧು ಮಾಚಿ ತಂಡೆ "ಕಲ್ಲಿನಾಥದೇವಾಲಯ"ದಲ್ಲಿ
ಸಂಭ್ರಮದಿ ಮಾಳ್ಪ ಶಿವಲಿಂಗಪೂಜೆಯೊಳು ತೊಡಗಿರ್ದರಯ್ಯ !
ಸಾಲು ಸಾಲಾಗಿರ್ಪ ವಜ್ರಸುವು ಕಂಬಗಳ ಮೇಲಲ್ಲಿ
ರತ್ನಖಚಿತ ಬೋದಿಗೆಗಳು ಹೊಳೆಯುತಿರಲು,
ಸುವರ್ಣ ಕದವೆರಡು ತೆರೆದು ಪೂರ, ಗರ್ಭಗುಡಿದ್ವಾರ,
ರವಿಕೋಟಿ ಬೆಳಗಿನಲ್ಲಿ ಶಿವಲಿಂಗ ರಾಜಿಪುದು.
ಇಂತು ಶಿವಾಲಯದೊಳು ವೀರಘಂಟೆಯಾ ಮಾಚಿದೇವಯ್ಯ,
ಪವಿತ್ರ ತ್ರಿದಳ ಭಸ್ಮತಿಳಿ ನೀಲುಧವಳಾಂಗನಾಗಿರ್ದನಯ್ಯ,
ಪ್ರಮಥ ಪುಂಗವ ಜಟಾಧಾರಿ ವಜ್ರದೇಹಿ ಮಾಚಿತಂದೆ
ಶೋಭಿಸುತಿರೆ ಸಾತ್ವಿಕ ತೇಜವಾಂತು "ವೀರಭದ್ರಾವತಾರಿ"
ಇಂತಿರಲಲ್ಲಿ "ಕನ್ನಡ ಕವಿಕಾಳಿದಾಸ" ಗರ್ಭಗುಡಿದ್ವಾರ ಬಳಿ
ಹರ್ಷದಿಂದೀಕ್ಷಿಸುತೆ ಹಾಯಾಗಿ ಕುಳ್ಳಿರ್ದನಯ್ಯ,
ಆಗೊಬ್ಬ ಭವಿ ಬಂದು ತತ್‌ಕ್ಷಣ ಅಡಗಲೆಂದು ಗಡನೆ
ಗರ್ಭಗುಡಿಯೊಳು ಹೊಕ್ಕು ಗುಡಿಯು ಮೈಲಿಗೆ ಮಾಡೆ
ಇದ ಕಂಡು ಕೋಪದಿಂ ನುಡಿದರಾಗ "ಮಡಿವಾಳ ಮಾಚಿತಂದೆ":
ಎಲೈ "ಬಂಧು ಕೊಲೆಪಾತಕಿ" ತೊಲಗು ಬೇಗ ನೀನಿಲ್ಲಿಂದ
ದೇವಮಂದಿರ ಮೈಲಿಗೆಯಾಯ್ತು! ಶಿವನ ವೈಭವ ಹಾಳಾಯ್ತು!
ಮತ್ತೆಗುಡಿ ತೊಳೆದು ಮಡಿ ಮಾಡಬೇಕು! ಶಿವಲಿಂಗಪೂಜೆಗೈಯ್ಯಬೇಕು!
ಇಂತು ಗರ್ಜನೆಯ ನುಡಿ ಕೇಳ್ದೊಡನೆ ಪಾಪಿಯಲ್ಲಿಂದ ಕಾಲ್ದೆಗೆದ.
ಅನಿತರೊಳು ಮಮಪ್ರಿಯಸತಿ "ಮಹಾದೇವಿ" ಪುಣ್ಯವತಿ ಧರ್ಮದಾತೆ
ತುಂಬಿದಾ ಮಡಿನೀರ್ ಕೊಡ ಹೊತ್ತು ಶಿವಾಲಯಕ್ಕೈ ತಂದಳಲ್ಲಿ!
ಎನಿತು ಮಡಿವಾಳ ಮಾಚಿ ತಂದೆಗಳಾ ಮಹಿಮೆಯೊ
ನಾನರಿಯೆ! ಶಿವಶರಣ ಶಿಖಾಮಣಿಯೆನೆ ತ್ರಿಕಾಲ ಜ್ಞಾನಿಗಳಲ್ತೆ ?
ತಂಗಾಳಿ ಚಳಿ ಹೆಚ್ಚಿ ಗಡಗಡನೆ ನಡುಗಿ ಮೈಕೊರೆಯುತಿರ್ದಪು
ಆಗ ಶಿವಾಲಯು ಸಹಿತ ನಾವೆಲ್ಲ ಜಲ ಸ್ನಾನಗೆಯ್ದು ಮಡಿಯಾದೆವಯ್ಯ !

ಎನಿಸು ಕಾಲ ತಪವಗೆಯ್ದೊಡು ಶಿವಶರಣ ಸಂದರ್ಶನವು
ಮನುಜ ಲೋಕಕ್ಕೆ ದುರ್ಲಭವಾಗಿರಲಿಂದು ತಾನೆ!
ಅವ ಜನ್ಮದ ಪುಣ್ಯದ ಫಲವೊ ನಾಕಾಣೆ! ಇಂತು ಮಾಜಿತಂದೆ
ದೇವ ಮಂದಿರದಿ ಕಾಣಿಸಿ ಕೊಂಡೆನ್ನನು ಧನ್ಯನಾಗಿಸಿಹರಯ್ಯಾ!
ಒಂದಿಲ್ಲ ಒಂದು ಬಗೆಯಾಗಿ ಶ್ರೀ ಬಸವಾದಿ ಪ್ರಮಥರು
ದರ್ಶನ ನೀಡಿ "ಧರ್ಮಜ್ಞಕವಿ" ಕೈಪಿಡಿದು ಪೈದಡವಿ
ಕಾರುಣ್ಯದ ಹೊಳೆಹರಿಸಿ ಪುನೀತಗೊಳಿಸಿಹರಯ್ಯಾ!
ಕೇಳಾ ಶ್ರೀಶೈಲ ಮಲ್ಲಿಕಾರ್ಜುನ."

## ನಿಗೂಢ ಬರಹ [125]

"ಪರಮಾತ್ಮ ಸ್ವರೂಪಿಯಾಗಿರ್ದ "ಶಿರಡಿ ಸಾಯಿ ಬಾಬಾ" ಅಂದು
ಧರಣಿಯೊಳವತರಿಸಿ ತವ ಕಾರ್ಯಪೂರೈಸಿ ದಿವ್ಯ ಬೆಳಕಾಗಿನಿಂದಿರ್ದ
ಮುಕ್ತಾತ್ಮ! ದೇಹಾವಸಾನವಾಗಿರ್ದೊಡ: ಚಿರಕಾಯರಾಗುಳಿದು
ಭಕ್ತಹೃದಯ ಸಿಂಹಾಸನದಿ ಕುಳ್ಳಿರ್ದು ಆತ್ಮಗತವಾಗಿಹರು ನೋಡಾ!
ಅಕ್ಷರ ತತ್ವವನು ಅಮರ ಗೊಳಿಸಲೆಂದಿಳೆಯೊಳಿಂದು
ಅಕ್ಷರ ಬ್ರಹ್ಮವಾಗಿ ಮಮ ದೇಹಗತವಾಗಿ ನಿಂದು
ಅಮಮ! ಚಿತ್ತದ ಸಹಾಯ್ಯವಿಲ್ಲದೆನ್ನ ಹಸ್ತಗಳಿಂದೆ
ಸುಮನೋಹರ ಅಕ್ಷರಂಗಳನು ಬರೆಯುತಿಪ್ಪರು ನೋಡಾ!
ಸಾಯಿ ಶಕ್ತಿಯೊಲು ಭಕ್ತದೇಹದೊಳು ನಿಂದು ಲೋಕದೊಳಿಂದು
ಕಾಯವಳಿದೊಡು ಕಾರ್ಯ ಗೆಯ್ಯುತಿಪ್ಪ ಬೇರೊಬ್ಬ ಮಹಿಮನಾ
ಶಕ್ತಿಚೈತನ್ಯ ನಾನೆಲ್ಲಿ ಕಂಡಿಲ್ಲ ನೋಡಾ!
ಮಾಯ ನತಿಗಳೆದು ಕಾಲ-ಕಾಮರ ಜಯಿಸಿ ನಿಂದ, ಇಂತಪ್ಪ
ಸಾಯಿದೇವನಾ "ಶಿವಶಕ್ತಿಗಂಗೆ" ಧಾತ್ರೀ ತಲದೊಳು
ಪೂರ್ವದೊಳಾರಿಂದಲೂ ಪ್ರವಹಿಸಲಿಲ್ಲ ನೋಡಾ!
"ಧರ್ಮಜ್ಞಕವಿ" ಆತ್ಮಗತವಾಗಿರ್ಪ ಸಾಯಿನಾಥ!
ಧರ್ಮಜ್ಯೋತಿಯಾಗಿ ದಿವ್ಯಶಕ್ತಿ ಚೈತನ್ಯವಾಗಿ
ಶಿವವಾಗಿ ಛವಿಯಾಗಿ ಬೆಳಗುತಿಪ್ಪರು ನೋಡಾ!
ಬಸವಾದಿ ಪ್ರಮಥರನುಭಾವ ತತ್ವಮೂರ್ತಿಯೆನೆ ಅವ್ಯಕ್ತ ಬಾಬಾ!
ಅಸಮಜ್ಞಾನಿ ಮಹಂತ ಮಹಿಮಾಗಾರ ಸಂತ! ಬ್ರಹ್ಮಾಂಡ ಭರಿತ!
ಕಲಿಯುಗದ ಕಾಮಧೇನು ಕಲ್ಪವೃಕ್ಷ ನೋಡಾ!
ಎಲ್ಲಿ ಇದ್ದಲ್ಲಿ ಭಕ್ತಿಯಿರುವಲ್ಲಿ ನಾನಿರುವೆ ಅಲ್ಲಿ ಎನ್ನುವರು ಬಾಬಾ!

ಲಲಿತ ಭಕ್ತಿದೇಹಿ ಪರಮಾತ್ಮ ನಿರ್ದೇಹಿ ಪರಮ ನಿರಂಜನಮೂರ್ತಿ ನೋಡಾ !
ಪೃಥ್ವಿಯಾ ಪುರುಷಮಣಿಯೆನಿಸಿರ್ದ ಸಾಯಿನಾಥ! ಮಮ ಹೃದಯಾತ್ಮ ಪೂತ!
ಾ ಪುರೋಗಮನ ಪ್ರಳಯಂಗಳೆನ್ನೆಲ್ಲಮಂ ತಿಳುಪಿ ಬರೆದು ತೋರುತಿರ್ಪರುನೋಡಾ!
"ಕನ್ನಡಕವಿ ಕಾಳಿದಾಸ"ನಾ ಕಾಯುವಳಿದೊಡುಂ ಪರತತ್ತ್ವಾನ್ವಿತ
ಸ್ನುತ ಕೀರ್ತಿ ಕವಿಯಾತ್ಮಗತವಾಗಿರ್ದು ಬಾಬಾ ಬೆಳಗುತಿಪ್ಪರು ನೋಡಾ !

ಶಿವನಾಣೆ ! ಶಿವಶರಣರ ಪಾದದಾಣೆ !
ಕವಿವಚನವಾಣಿ ! ಪರಮ ಸತ್ಯವಾಣಿ !
ಕೇಳಾ, ಶ್ರೀಶೈಲ ಮಲ್ಲಿಕಾರ್ಜುನ ! "

## ಆದಿಗುರು ಬಸವಣ್ಣ ಭುವನ ಭಾಗ್ಯ-[126]

ನಮ್ಮ ಶಿವಶರಣನುದಯದಿಂ ಧರೆಯು ಪಾವನವಾಗಿತ್ತು ನೋಡಾ !
ನಮ್ಮ ಶಿವಶರಣ ನೆಲಸಿದ ನೆಲವೇ ಕೈಲಾಸವಾಯಿತ್ತು ನೋಡಾ !
ನಮ್ಮ ಶಿವಶರಣ ಕಾಲ್ತೊಳೆಯೆ ಜಲಗಂಗೆ ಪವಿತ್ರಪ್ಪಳು ನೋಡಾ !
ಇಂತೀ ನಮ್ಮ ಶಿವಶರಣ ಪ್ರಮಥರಾ ಪಂಚಪ್ರಾಣವಾದ
ಭಕ್ತಿಭಂಡಾರಿ ಬಸವಣ್ಣನುದಯದಿಂದೆ, ಭುವನ ಭಾಗ್ಯ
ತುಂಬಿ ಬಂದಿತ್ತು ನೋಡಾ ! ಶ್ರೀಶೈಲ ಮಲ್ಲಿಕಾರ್ಜುನ."

## ಪ್ರಭುದೇವನ ಪರಮಗುರು ಬಸವಣ್ಣ [127]

"ಅನಿಮಿಷಂಗೆ ಲಿಂಗವಕೊಟ್ಟು ಗುರುವಾದ ಬಸವಣ್ಣ.
ಈ ಅನಿಮಿಷನಿಂದ ಲಿಂಗವ ಪಡೆದಾತ ಪ್ರಭುದೇವ.
ಆ ಅನಿಮಿಷಂಗೆ ಗುರುವಾಗಿರ್ದ ಬಸವಣ್ಣ
ಈ 'ಪ್ರಭುದೇವಂಗೆ' ಗುರುವಿನಗುರು' ಪರಮಗುರುವಾಗಿಹನು ನೋಡಾ !
ಶ್ರೀ ಶೈಲಮಲ್ಲಿಕಾರ್ಜುನ !"

## ಸಿದ್ಧರಾಮನಪರಮಗುರು ಬಸವಣ್ಣ [128]

"ಚನ್ನಬಸವಣ್ಣಂಗೆ ಲಿಂಗವಕರುಣಿಸಿ ಗುರುವಾದಾತ ಬಸವಣ್ಣ !
ಚನ್ನಬಸವಣ್ಣನಿಂದ ಲಿಂಗವ ಪಡೆದು ಶಿವಯೋಗಿಯಾದ ಸಿದ್ಧರಾಮ !
ಆ ಚನ್ನಬಸವಣ್ಣಂಗೆ ಗುರುವಾದ ಬಸವಣ್ಣ,
ಈ ಸಿದ್ಧರಾಮಂಗೆ ಗುರುವಿನಗುರು ಪರಮಗುರುವೆನಿಸಿರ್ದನು.
ಕೇಳಾ, ಶ್ರೀ ಶೈಲಮಲ್ಲಿಕಾರ್ಜುನ !"

## ವೀರಶೈವಧರ್ಮಸ್ಥಾಪನಾಚಾರ್ಯ ಬಸವಣ್ಣ [129]

"ಶಿವಭಕ್ತಿ ದಳೆದು ಪ್ರೀತಿಯಿಂ ಪಡೆಯಬಂದ
ಲಕ್ಷಕ್ಕೂ ಮಿಕ್ಕಿ ಅಸಂಖ್ಯಾತ ಬಂಧು ಬಳಗಕ್ಕೆ
ಇಷ್ಟಲಿಂಗವ ಕೊಟ್ಟಾತ ನಮ್ಮ ಬಸವಣ್ಣ !
ಶತಕೋಟಿ ಹೃದಯಭೂಮಿಯೊಳು ಭಕ್ತಿ-ಪ್ರಣವ
ಬೀಜವ ಬಿತ್ತಿ ಶಿವಧರ್ಮಕೃಷಿಗೆಯ್ದಾತ ನಮ್ಮ ಬಸವಣ್ಣ
ಮಹಾಲಿಂಗ ಮಹಿಮೆಯನು ಮೂಲೋಕಕ್ಕೆ ತೋರಿದಾತ ನಮ್ಮ ಬಸ
ತ್ರಿಲೋಕ ಪರಮಗುರುವಾದಾತ ನಮ್ಮ ಬಸವಣ್ಣ !
ಪೃಥ್ವೀತಲದಲ್ಲಿ ನಮ್ಮ ಬಸವಣ್ಣನಂತೆ ಭಕ್ತಿಗೆಯ್ದವರಾರನೂ
ನಾಕಾಣೆ। ಶಿವನಾಣೆ! ಸತ್ಯವಾಣಿ।
"ದೇವಕವಿಧರ್ಮಜ್ಞವಾಣಿ !"
"ವೀರಶೈವಧರ್ಮಸ್ಥಾಪನಾಚಾರ್ಯ" ಬಸವಣ್ಣ !
ಕವಿಯ ಶತಕೋಟಿ ಪ್ರಣಾಮ! ತಂದೆ ಬಸವಣ್ಣನಿಗೆ
ಹೇಳ ಬಾರಾ, ಶ್ರೀ ಶೈಲಮಲ್ಲಿಕಾರ್ಜುನ !"

## ಷಟ್‌ಸ್ಥಲತತ್ವರಹಸ್ಯ: [130]

"ಷಟ್‌ಸ್ಥಲಗಳು ಪರಸ್ಪರ ಭಿನ್ನವಲ್ಲವಯ್ಯಾ.
ಅವು ಒಂದರೊಳಗೊಂದು ಹೊಂದಿಕೊಂಡಿಪ್ಪುವಯ್ಯಾ.
ಭಜಿಸಿ "ಭಕ್ತ"ನಾದವನೆ ಆಚರಿಸಿ "ಮಾಹೇಶ್ವರ" ನೆನಿಸುವನ
ಆ ಮಾಹೇಶ್ವರನೆ ಮನೋನೈರ್ಮಲ್ಯದಿಂದ "ಪ್ರಸಾದಿ" ಯೆನಿಸುವನ
ಆ ಪ್ರಸಾದಿಯೇ ದಿವ್ಯಜೀವ ಕಳಾತ್ಮಲಿಂಗಜ್ಞಾನದಿಂದ "ಪ್ರಾಣಲಿಂಗಿಯೆನಿಸುವ
ಆ ಪ್ರಾಣಲಿಂಗಿಯೇ ಸತಿ-ಪತಿ ಭಾವದಿಂದ "ಶರಣ"ನೆನಿಸುವನಯ್ಯಾ
ಆ ಶರಣನೆ ಸಮರಸ ಭಾವದಿಂದ 'ಐಕ್ಯ"ನೆನಿಸುವನಯ್ಯಾ,
ಇಂತೀ ಲಿಂಗಭಕ್ತನ ಷಟ್‌ಸ್ಥಲ ರಹಸ್ಯವಿದೆಂಬೆ।
ಕೇಳಾ, ಶ್ರೀಶೈಲ ಮಲ್ಲಿಕಾರ್ಜುನ!"

## ಷಟ್‌ಸ್ಥಲಾತ್ಮಕ ಷಡ್ಲಿಂಗಗಳ ವ್ಯಾಖ್ಯೆ: 131

"ಮೂಗು, ನಾಲಿಗೆ, ಕಣ್ಣು, ತೊವಲು, ಕಿವಿ, ಹೃದಯಗಳಲ್ಲಿ
ಪರಿವಿಡಿದು-ಆಚಾರಲಿಂಗ, ಗುರುಲಿಂಗ ಶಿವಲಿಂಗ,
ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗಗಳನ್ನು ಧರಿಸಿ,
ಆ ಲಿಂಗಗಳ ಪ್ರಭೆಯಿಂದ ಪ್ರಕಾಶಿಸುತಿಪ್ಪ, ಷಟ್‌ಸ್ಥಲಾತ್ಮಕವಾದ
ಶರೀರವನ್ನು ತಳೆದಾತನೇ ಶರಣ ನೋಡಾ!
ಇಂತಪ್ಪ ಶರಣರಿಗೆ ಭೌತಿಕ ಮಹತ್ವ ನಿವೃತ್ತಿಯಾಗಿಪ್ಪುದು ನೋ

ಇದುವೆ ಷಟ್‌ಸ್ಥಲಾತ್ಮಕ ಷಡ್ಲಿಂಗಗಳ ವಿವರಣೆ
ಕೇಳಾ, ಶ್ರೀ ಶೈಲಮಲ್ಲಿಕಾರ್ಜುನ।"

**ಪರತತ್ತ್ವ ತನ್ನಿಂದ ಅನ್ಯವಿಲ್ಲ: [132] ಪರತತ್ತ್ವ ವಿಚಾರ**

ತನ್ನ ತಾನರಿದೊಡೆ ತಾನೆ ದೇವ ನೋಡಾ !
ತನ್ನಬಿಟ್ಟು ಪರತತ್ವವಿಲ್ಲ ನೋಡಾ.
ಆ ಪರತತ್ತ್ವವನು ಬಿಟ್ಟು ಬೇರೆ ದರ್ಶನವಿಲ್ಲ ನೋಡಾ.
ತನ್ನ ಗುರು-ಲಿಂಗಗಳ ವ್ರತಧರ್ಮಗಳಿಗಿಂತ ಬೇರೆ ದರ್ಪಣವಿಲ್ಲ ನೋಡಾ.
ಈ ಕೈಗನ್ನಡಿಯಲ್ಲಿ ತನ್ನ ಸ್ವರೂಪಮಂ ನೋಡಿದೊಡೆ,
ಅದು ಅತ್ಯಧಿಕನಾಗಿ ವಿಸ್ತಾರವಾಗಿ ದಿವ್ಯಕಾಂತಿವಳೆದು
ಮಾರ್ಪೊಳೆವುದು ನೋಡಾ.
ಇಂತು ಮಾರ್ಪೊಳೆವ ತನ್ನ ಆ ಸೌಂದರ್ಯವೇ
ಶಿವತತ್ತ್ವ ಕೇಳಾ ಶ್ರೀಶೈಲ ಮಲ್ಲಿಕಾರ್ಜುನ!"

ಸ್ವರೂಪ ಸಾಕ್ಷಾತ್ಕಾರ: [133]

ಕನ್ನಡಿಯನ್ನು ನೋಡುವ ಸುಂದರಾಂಗನೆಯ ಬಯಕೆಯು
ಬೆಡಗ ಬಿನ್ನಾಣಗಳಿಂದ ಕೂಡಿದ್ದ ತನ್ನ ವನಪಿನ
ಮೈ ಸೌಂದರ್ಯವನ್ನು ನೋಡುವುದರಲ್ಲಿರುವುದಲ್ಲದೆ,
ಆ ಕನ್ನಡಿಯನ್ನು ನೋಡುವುದರಲ್ಲಿಲ್ಲವಯ್ಯಾ !
ಹಾಗೆಯೇ ಶರಣನು ತನ್ನ "ಅನುಭವ ಮುಕುರ"ದಲ್ಲಿ ಅರ್ಥಾತ್
ಲಿಂಗಾರ್ಚನಾನುಭವವೆಂಬ ಕನ್ನಡಿಯಲ್ಲಿ ತನ್ನನೆ ಕಾಂಬನು ನೋಡಾ!
ಸ್ವರೂಪ ಸಾಕ್ಷಾತ್ಕಾರವೆ ಅರ್ಚನಾನುಭವದ
ಉದ್ದೇಶವಾಗಿಹುದು, ಕೇಳಾ, ಶ್ರೀಶೈಲ ಮಲ್ಲಿಕಾರ್ಜುನ."

ಮಾಯಾನಿರಶನ: [134]

"ಕನ್ನಡಿಯನ್ನು ನೋಡುವ ಮುನ್ನ
ಕನ್ನಡಿಯ ಭಾವವಿರುವುದು ನೋಡಾ.
ನೋಡಿದ ಬಳಿಕ ತನ್ನಸ್ವರೂಪದ ಭಾವವಿರುವುದಲ್ಲದೆ
ಕನ್ನಡಿಯ ಭಾವವಿರದು ನೋಡಾ.
ಅದರಂತೆ ತತ್ತ್ವವನು ತಿಳಿಯುವ ಮುನ್ನ
ಮಾಯೆಯುಂಟಲ್ಲದೆ,
ತಿಳಿದು ತತ್ತ್ವಸ್ವರೂಪವೆ ತಾನಾದಾಗ
ಮಾಯೆಗಿಂಬಿಲ್ಲ.
ಕೇಳಾ,ಶ್ರೀಶೈಲಮಲ್ಲಿಕಾರ್ಜುನ!"

"ಷಟ್‌ಸ್ಥಲವನುಳಿದು ಗುರುಬೇರೊಬ್ಬನಿಲ್ಲವಯ್ಯಾ.
ಷಟ್‌ಸ್ಥಲವನುಳಿದು ಜಂಗಮ ಬೇರೊಬ್ಬನಿಲ್ಲವಯ್ಯಾ.
ಷಟ್‌ಸ್ಥಲವನುಳಿದು ಸ್ವಾಮಿ (ವಿರಕ್ತ) ಬೇರೊಬ್ಬನಿಲ್ಲವಯ್ಯಾ.
ಷಟ್‌ಸ್ಥಲದ ಹೊರಗುಳಿದು ತಾವು ಪೂಜ್ಯರೆಂದು
ಹೊಗಳಿಸಿಕೊಂಬುವರ ಮಾತುಗಳೆಲ್ಲ ಹುಸಿಕಾಣಿರಯ್ಯಾ.
ಅನಾದಿ ಶರಣ ಬಸವಣ್ಣನೆಂಬುವಾ ನಮ್ಮ ಪುರಾತನರ
ಮಹಾಮಂತ್ರವಾಣಿ ಕೇಳಿ ಅರಿಯಿರಯ್ಯಾ.
ಗುರು-ಲಿಂಗ-ಜಂಗಮದುತ್ಪತ್ತಿ ನಮ್ಮ ಬಸವಣ್ಣನಿಂದಾಯಿತ್ತು.
ಕೇಳಾ, ಶ್ರೀಶೈಲಮಲ್ಲಿಕಾರ್ಜುನ!"

---

## —: ಶ್ರೀವಾಣಿ :—

ತತ್ತ್ವವಿರೋದ, ಧರ್ಮವಿರೋಧ, ದೈವವಿರೋಧ, ಆತ್ಮವಿರೋಧಗಳ ಮಧ್ಯೆ ಬಾಳುತ್ತಿದ್ದೇವೆ. ಹಿರಿಯರು ಕೊಟ್ಟು ಹೋಗಿರುವ ತತ್ತ್ವಾನುಸರಣೆಯಿಂದ, ಮಾನವೀಯತೆಯೇ ಧರ್ಮದ ನೈಜಸ್ವರೂಪವೆಂದು ನಿಶ್ಚಿತ ಜ್ಞಾನದಿಂದ, ದೈವೀಶಕ್ತಿಯ ಒಂದು ಕಿರು ಉಪಕರಣ ನಾನು ಎಂಬ ನಮ್ರ ಭಾವನೆಯಿಂದ, ಮಾತು ಮನ ಕೃತಿಗಳ ಮಧ್ಯೆ ಅಂತರ ಬರದಂತೆ ಬಾಳುವುದನ್ನು ಕಲಿತಾಗ ಮಾತ್ರ ಜೀವನವನ್ನು ಪವಿತ್ರ ಪ್ರಸಾದವೆಂದು ಕಂಡು ಕೊಂಡಂತಾಗುತ್ತದೆ.

—ಡಾ|| 'ಬಸವಾವತಾರಿ' ಶ್ರೀ ಸಿದ್ಧಗಂಗಾಧಿಪತಿ, ಶ್ರೀ ಶಿವಕುಮಾರಮಹಾಸ್ವಾಮಿಗಳು

# ವಿಜ್ಞಾನ ಮತ್ತು ಆಧ್ಯಾತ್ಮ (ಆಯುರ್ವೇದದಲ್ಲಿ)

.ಎಸ್. ನರಸಿಂಹಜೀಯರ್, ಲಕ್ಷ್ಮಯ್ಯನ ಕೋಟೆ, 14ನೇ ಕ್ರಾಸ್, ಸೋಮೇಶ್ವರಪುರಂ
ತುಮಕೂರು-2

ವ್ಯಾಸರು ವೇದಗಳನ್ನು ನಾಲ್ಕು ಮುಖ್ಯ ಭಾಗಗಳನ್ನಾಗಿ ವಿಂಗಡಿಸಿ ವೇದ ...ಸರೆಂದೇ ಹೆಸರಾದರು. ಈ ನಾಲ್ಕು ವೇದಗಳಿಗೂ ಉಪವೇದಗಳಿವೆ. ಈ ಉಪ ...ದಗಳೆಲ್ಲವೂ ವೈಜ್ಞಾನಿಕ ವಿಷಯಗಳೇ (Scientific Knowledge) ಆಗಿವೆ. ...ಗ್ವೇದದ ಉಪವೇದವೇ ಆಯುರ್ವೇದ. ಆಯುರ್ವೇದವು ಮನುಷ್ಯನ ಆರೋಗ್ಯಕ್ಕೆ ...ಬಂಧಿಸಿದವಿಜ್ಞಾನಶಾಸ್ತ್ರ. ((Aurveda is the science of life dea-...g with anatomy, Physiology, Sanitary Science, dise-...es and their diagnosis, medicines from herbs and roots ...d even surgery) ಮಾನವನಿಗೆ ಬರುವ ರೋಗ ರುಜಿನಗಳಿಗೆ ಸುಲಭವಾಗಿ ...ಕೃತಿಯಲ್ಲಿದೊರೆಯುವ ಸಸ್ಯಗಳ ಎಲೆ, ಕಾಂಡ ಮತ್ತು ಬೇರುಗಳಿಂದಲೇ ಔಷಧಿ ...ಯಾರಿಸಿ ಆರೋಗ್ಯ ಕಾಪಾಡಿ ಕೊಳ್ಳುತ್ತಿದ್ದರು. ಇದಕ್ಕಾಗಿ ಗಿಡ ಮೂಲಿಕೆಗಳನ್ನು ...ರಿ ತಲಾಂತರಗಳಿಂದ ಒಬ್ಬರಿಂದೊಬ್ಬರಿಗೆ ಪರಿಚಯಿಸುತ್ತಾ ಉಪಯೋಗಿಸುವ ...ಧಾನಗಳನ್ನುತಿಳಿಸುತ್ತಿದ್ದರು.

ಆಯುರ್ವೇದ ವಿಜ್ಞಾನವನ್ನು ನಮ್ಮ ಪೂರ್ವಜರು ಆಧ್ಯಾತ್ಮ ರೀತಿಯಲ್ಲಿಯೂ ...ರಿಚಯಿಸುತ್ತಿದ್ದ ಒಂದು ವಿಧಾನವನ್ನು ಪರಿಶೀಲಿಸಿದಾಗ ಅವರ ಇಂತಹ ಬುದ್ಧಿಶಕ್ತಿ-...ಯನ್ನು ಮೆಚ್ಚಬೇಕಾದದ್ದೆ. ಔಷಧಿ ತಯಾರಿಕೆಗೆ ಬೇಕಾದ ಗಿಡಮೂಲಿಕೆಗಳ ...ತ್ರೆಗಳನ್ನು ಸಂಗ್ರಹಿಸಿ ಅವುಗಳನ್ನು ದೇವರ ಆರಾಧನೆಗೆ ಉಪಯೋಗಿಸುತಿದ್ದುದರಿಂದ ...ರಿಯರಿಗೂ ಈ ವನಸ್ಪತಿಗಳ ಪರಿಚಯವಾಗಿ ಅವುಗಳನ್ನು ಸಂಗ್ರಹಿಸುವ ಬಗ್ಗೆ, ...ಕ್ಷಣೆ ಮಾಡುವ ಬಗ್ಗೆ, ಉಪಯೋಗಿಸುವ ಬಗ್ಗೆ ತರಬೇತಿ ಕೊಟ್ಟಂತಾಗುತ್ತಿತ್ತು.

ಭಾದ್ರಪದ ಶುಕ್ಲ ಚೌತಿಯಂದು ವರಸಿದ್ಧಿ ವಿನಾಯಕ ವ್ರತವನ್ನು ...ಭಾರತೀಯರಲ್ಲಿ ಬಹುಮಂದಿ ಆಚರಿಸುತ್ತಾರೆ. ಲೋಕಮಾನ್ಯ ತಿಲಕರು ಈ ...ಉತ್ಸವವನ್ನು ಸಾಮೂಹಿಕವಾಗಿ ಆಚರಿಸುವ ಪ್ರಯತ್ನಮಾಡಿ ಇದನ್ನು ರಾಷ್ಟ್ರೀಯ ...ಹಬ್ಬವಾಗಿ ಮಾಡಿದ್ದಾರೆ. ಈ ಹಬ್ಬವನ್ನು ಆಚರಿಸುವ ಮೂಲಕ ರಾಷ್ಟ್ರಪ್ರೇಮ, ...ರಾಷ್ಟ್ರಭಕ್ತಿಯನ್ನು ಸಾಮಾನ್ಯರಲ್ಲಿ ಮೂಡಿಸಲು ಸಫಲರಾದರು. ಈ ವಿಘ್ನೇಶ್ವರನನ್ನು ಪೂಜಿಸುವಾಗ ಭಾದ್ರಪದಮಾಸದಲ್ಲಿ ಸುಲಭವಾಗಿ ದೊರೆಯುಬಹುದಾದ ಔಷಧಿಯುಕ್ತ ಮೂಲಿಕೆಗಳ ಪತ್ರೆಗಳನ್ನು ಅರ್ಪಿಸಿ ಗಣಪತಿಪೂಜೆ ಮಾಡುತ್ತಿರುವುದು ಒಂದು ವಿಶೇಷ ...ಸರ್ವಗಣಗಳಿಗೆ ಒಡೆಯನಾದ ಗಜಾನನನನ್ನು; ಆತನ ಇಪ್ಪತ್ತೊಂದು ನಾಮಗಳನ್ನು

ಉಚ್ಚರಿಸಿ ನಮಸ್ಕರಿಸುತ್ತಾ ಇಪ್ಪತ್ತೊಂದು ಬಗೆಯ ಪತ್ರೆಗಳಿಂದ ಆರಾಧಿಸುವ ಪೂ
"ಏಕಾವಿಂಶತಿ ಪತ್ರಪೂಜಾ" ಅದರ ವಿವರಗಳನ್ನು ಆದರಲ್ಲಿ ಅಡಗಿರುವ ವೈಜ್ಞಾ
ಅಂಶಗಳನ್ನು ನೋಡೋಣ.

## ಏಕಾ ವಿಂಶತಿ ಪತ್ರ ಪೂಜಾ :-

(1) ಓಂ ಸುಮುಖಾಯ ನಮಃ- ಮಾಚೀ ಪತ್ರಂ ಪೂಜಾಯಾಮಿ. ಮಾಚೀ
(Botonical name-Imperata cylindrica) (ದರ್ಭೆ) ದರ್ಭೆಯು
ವಾತಾವರಣವನ್ನು ಶುದ್ಧಿಗೊಳಿಸುತ್ತದೆ.

(2) ಓಂ ಗಣಾಧಿಪಾಯ ನಮಃ— ಬೃಹತೀ ಪತ್ರಂ ಪೂಜಯಾಮಿ
ಬೃಹತೀ Carissa Carandas ಇದು ಹೆರಿಗೆ ಔಷಧ ನಂತರ ಹೆಣ್ಣುಮಕ್ಕಳಿಗೆ
ವರಪ್ರಸಾದ ದಂತಹ

(3) ಓಂ ಉಮಾಪುತ್ರಾಯ ನಮಃ— ಬಿಲ್ವಪತ್ರಂ ಪೂಜಯಾಮಿ. ಬಿಲ್ವ-
Aegle Marmelos. ಇದು ಗಾಳಿ ಮತ್ತು ನೀರಿನಲ್ಲಿರುವ ಮಾಲಿನ್ಯತೆ ಹೊ
ಲಾಡಿಸುತ್ತದೆ. ದೇವಾಲಯದ ಗರ್ಭ ಗುಡಿಯಂತಹ ಸ್ಥಳಗಳಲ್ಲಿ ವಾಯುವನ್ನು
ಶುದ್ಧಗೊಳಿಸುತ್ತದೆ. ಇದರ ಕಾಯಿ ಕೆಟ್ಟವಾಸನೆ ಹೋಗಲಾಡಿಸುತ್ತದೆ.

(4) ಓಂ ಗಜಾನನಾಯ ನಮಃ — ದೂರ್ವಾಯುಗ್ಮಂ ಪೂಜಯಾಮಿ.
ದೂರ್ವಾ ಯುಗ್ಮ-Cynodom Dactylon ಇದು ಚರ್ಮರೋಗಗಳನ್ನು ನಿವಾ
ಮಾಡುತ್ತದೆ. ದನಗಳಿಗೆ ಒಳ್ಳೆಯ ಆಹಾರ (Grass)

(5) ಓಂ ಹರಸೂನವೇ ನಮಃ — ದತ್ತೂರ ಪತ್ರಂ ಪೂಜಯಾಮಿ. ದತ್ತೂ
Duttura Stramonium. ದತ್ತೂರಿಗಿಡದ ರಸವು ವಿಷಾಪಹಾರಿ. ಇಲಿ
ಝರಿ, ಚೇಳು ಕಡಿತಕ್ಕೆ ಹಚ್ಚಿದರೆ ವಿಷಪರಿಹಾರ.

(6) ಓಂ ಲಂಬೋದರಾಯ ನಮಃ — ಬದರಿ ಪತ್ರಂ ಪೂಜಯಾಮಿ. ಬದ
Zizyphus jujuba ಇದು ಮುಳ್ಳಿರುವ ಮರ, ಸಣ್ಣಎಲೆ ಸಣ್ಣ ಹಣ್ಣುಬಿಡುತ್ತ
ಇದರ ಎಲೆಗಳನ್ನು ಸುಮಧುರ ಧ್ವನಿ ಪಡೆಯಲು ಉಪಯೋಗಿಸುತ್ತಾರೆ.

(7) ಓಂ ಗುಹಾಗ್ರಜಾಯ ನಮಃ- ಅಪಾಮಾರ್ಗ ಪತ್ರಂ ಪೂಜಯಾಮಿ
ಅಪಾಮಾರ್ಗ Achyrantus Aspera. ಇದರ ಎಲೆಯ ರಸವು ವಿಷಜಂತುಗ
ಕಡಿತದ ವಿಷನಿವಾರಣೆ ಮಾಡುತ್ತೆ. ಜಾಂಬುಕ್ ಮುಲಾಮಿನಲ್ಲಿ ಉಪಯೋಗಿಸುತ್ತಾ

(8) ಓಂ ಗಜಕರ್ಣಾಯ ನಮಃ— ತುಲಸೀ ಪತ್ರಂ ಪೂಜಯಾಮಿ. ತುಳಸಿ cimum sanctim ನೀರು ಗಾಳಿಯನ್ನು ಪರಿಶುದ್ಧಗೊಳಿಸುತ್ತದೆ. ಆರೋಗ್ಯ ರ್ಧನೆಗೆ ಉಪಯೋಗ. ಪ್ರತಿನಿತ್ಯ ಉಪಯೋಗಿಸಿದಲ್ಲಿ ಇಂದ್ರಿಯ ನಿಗ್ರಹ ಸಾಧ್ಯ.

(9) ಓಂ ಏಕದಂತಾಯ ನಮಃ— **ಚೂತ** ಪತ್ರಂ ಪೂಜಯಾಮಿ. ೂತ Azadaracta Indica (ಮಾವು). ತೋರಣಕ್ಕೆ ಹಾಗೂ ಗಂಟಲಿನ ೋಗ ನಿವಾರಣೆಗೆ ಉಪಯೋಗ. ಚಿಗುರು ಎಲೆಗಳು ಮಧುರ ಧ್ವನಿಬರಲು ಸಹಾಯ. ೋಗಿಲೆ ತಿನ್ನುತ್ತದೆ.

10) ಓಂ ವಿಕಟಾಯ ನಮಃ— ಕರವೀರ ಪತ್ರಂ ಪೂಜಯಾಮಿ. ಕರವೀರ- hevetia Nerifolium ಕರವೀರಡಿ ತೈಲ ಈ ಎಲೆಯಿಂದ ತಯಾರಿ. ತಲೆ ೂದಲಿನಲ್ಲಿ ಹೇನುಗಳು ನಾಶ. ಇದರ ಎಲೆ ಮತ್ತು ಕಾಯಿ ವಿಷ.

11) ಓಂ ಭಿನ್ನದಂತಾಯ ನಮಃ- ವಿಷ್ಣುಕ್ರಾಂತಪತ್ರಂ ಪೂಜಾಯಾಮಿ ವಿಷ್ಣು ಕ್ರಾಂತ- Evolvulus Alsinaides ಇದರ ರಸವು ಜ್ಞಾಪಕ ಶಕ್ತಿಯನ್ನು ಹೆಚ್ಚಿಸುತ್ತೆ. ಜ್ವರಹರ.

(12) ಓಂ ವಟವೇ ನಮಃ— ಡಾಡಿಮಿ ಪತ್ರಂ ಪೂಜಯಾಮಿ. ಡಾಡಿಮಿ- Pomegranate (ದಾಳಿಂಬೆ) ಇದರ ಎಲೆ ಮತ್ತು ಕಾಯಿಯ ರಸದಿಂದ ಭೇದಿ ನಿಲ್ಲುತ್ತೆ. ಗರ್ಭಸ್ರಾವ ತಡೆಯುತ್ತೆ.

(13) ಓಂ ಸರ್ವೇಶ್ವರಾಯ ನಮಃ— ದೇವದಾರು ಪತ್ರಂ ಪೂಜಯಾಮಿ. ದೇವದಾರು— Cedrus Deodara - ಸಣ್ಣ ಗುಂಡಾದ ಸುವಾಸನೆ ಎಲೆ. ಸೊಳ್ಳೆ ಕ್ರಿಮಿಕೀಟ ತಡೆಯುತ್ತೆ. ಆಯುರ್ವೇದ ಔಷಧ ತಯಾರಿಕೆಯಲ್ಲಿ ಉಪಯೋಗ.

14) ಓಂ ಫಾಲ ಚಂದ್ರಾಯ ನಮಃ- ಮರುವಕ ಪತ್ರಂ ಪೂಜಯಾಮಿ. ಮರುವಕ- Origanum Vulgara (ಮರುಗ) ಸುವಾಸನೆ ಎಲೆ, ಒಣಗಿದರೂ ವಾಸನೆಇರುತ್ತೆ. ಹೃದಯ ರೋಗಕ್ಕೆ ಉಪಯೋಗ. ಸುಗಂಧ ತೈಲ ತಯಾರಿ.

(15) ಓಂ ಹೇರಂಬಾಯನಮಃ- ಸಿಂಧುವಾರ ಪತ್ರಂ ಪೂಜಯಾಮಿ. ಸಿಂಧುವಾರ- Vitex Negunda ವಿಷಾಪಹಾರಿ-ಇದರ ರಸ ಕಣ್ಣನ್ನು ಸ್ವಚ್ಛಗೊಳಿಸುತ್ತೆ.

(16) ಓಂ ಶೂರ್ಪಕರ್ಣಾಯ ನಮಃ- ಜಾಜೀ ಪತ್ರಂ ಪೂಜಯಾಮಿ. ಜಾಜಿ- Myristica Frgrams ಸಾಂಬಾರ ಪದಾರ್ಥ-ಅಜೀರ್ಣವನ್ನು ಹೋಗಲಾಡಿಸುತ್ತದೆ.

17) ಓಂ ಸುರಾಗ್ರಜಾಯ ನಮಃ- ಗಂಡಾಲೀ ಪತ್ರಂ ಪೂಜಯಾಮಿ. ಗಂಡಾಲಿ-grass with white flowers ಚರ್ಮ ರೋಗಗಳಿಗೆ ಲೇಪನ ಮಾಡುತ್ತಾರೆ.

18) ಓಂ ಇಭವಕ್ತ್ರಾಯ ನಮಃ- ಶಮೀ ಪತ್ರಂ ಪೂಜಯಾಮಿ. ಶಮೀ-Prospis spicigera ಈ ಎಲೆಯ ರಸವು ಕೂದಲನ್ನು ತೆಗೆದು ಹಾಕುತ್ತೆ (Removes hair) Used by Alchemists in olden days.

19 ಓಂ ವಿನಾಯಕಾಯ ನಮಃ- ಅಶ್ವತ್ಥಂಪತ್ರಂ ಪೂಜಯಾಮಿ. ಅಶ್ವತ್ಥ Ficus Religiosa ಈ ಮರದ ಚಕ್ಕೆ ಔಷಧಕ್ಕೆ ಉಪಯೋಗ ಎಲೆಗಳು ಆನೆಗಳಿಗೆ ಮೇಕೆಗಳಿಗೆ ಒಳ್ಳೆಯ ಆಹಾರ,

20) ಓಂ ಸುರಸೇವಿತಾಯ ನಮಃ-ಅರ್ಜನ ಪತ್ರಂ ಪೂಜಯಾಮಿ. ಅರ್ಜನ-Morinda Tinctoria ಹೃದಯರೋಗ, ಹುಣ್ಣುಗಳಿಗೆ, ಕೀವು ಗಾಯಗಳಿಗೆ ಉಪಯೋಗ ಅರ್ಜನಾರಿಷ್ಠ-Famous Tonic ಇದರಿಂದ ತಯಾರಿ.

21) ಓಂ ಕಪಿಲಾಯ ನಮಃ-ಅರ್ಕಪತ್ರಂ ಪೂಜಯಾಮಿ ಅರ್ಕಪತ್ರಂ. Calotroph Procera ಎಲೆಯಿಂದ ಬಿಳಿಯ ಹಾಲಿನಂತಹ ದ್ರವ ಬರುತ್ತೆ. ಇದು ವಿಷಾಪಹಾರಿ. ಇಲಿ, ಜರಿ, ಚೇಳು ಕಡಿತಕ್ಕೆ ಉಪಯೋಗ. ಗಾಯಗಳನ್ನು ವಾಸಿಮಾಡುತ್ತೆ.

ಗಣಪತಿಯ ಏಕಾವಿಂಶತಿ ಪತ್ರ ಪೂಜೆಯು ಕೇವಲ ಒಂದು ಧಾರ್ಮಿಕ ಕ್ರಿಯೆಯಾಗಿರದೆ, ಕಿರಿಯರಿಗೆ ಔಷಧಯುಕ್ತವನಸ್ಪತಿಗಳ ಪರಿಚಯ ಮಾಡಿಕೊಡುವ ವೈಜ್ಞಾನಿಕ ಪದ್ಧತಿಯೂ ಹೌದು ಎಂಬುದು ಮೇಲಿನ ವಿವರಣೆಯಿಂದ ಸರ್ವರಿಗೂ ವೇದ್ಯವಾಗುತ್ತದೆ. (ಕೃಪೆ-ಭವಾನ್ಸ್ ಜರ್ನಲ್ 1969)

---

##  ಶ್ರೀ ಗಣೇಶಸ್ತವ 

ಅಜಂ ನಿರ್ವಿಕಲ್ಪಂ ನಿರಾಕಾರಮೇಕಂ । ನಿರಾನಂದಮಾನಂದಮದ್ವೈತ ಪೂರ್ಣಂ ॥
ಪರಂ ನಿರ್ಗುಣಂ ನಿರ್ವಿಶೇಷಂ ನಿರೀಹಂ । ಪರಬ್ರಹ್ಮರೂಪಂ ಗಣೇಶಂ ಭಜೇಮ ॥

ಗುಣಾತೀತಮಾನಂ ಚಿದಾನಂದರೂಪಂ । ಚಿದಾಭಾಸಕಂ ಸರ್ವಗಂ ಜ್ಞಾನಗಮ್ಯಂ
ಮುನಿಧ್ಯೇಯಮಾಕಾಶರೂಪಂ ಪರೇಶಂ । ಪರಬ್ರಹ್ಮರೂಪಂ ಗಣೇಶಂ ಭಜೇಮ ॥

ಜಗತ್ಕಾರಣಂ ಕಾರಣಜ್ಞಾನರೂಪಂ । ಸುರಾದಿಂ ಸುಖಾದಿಂ ಗಣೇಶಂ ಗಣೇಶಂ ॥
ಜಗದ್ವ್ಯಾಪಿನಂ ವಿಶ್ವವಂದ್ಯಂ ಸುರೇಶಂ । ಪರಬ್ರಹ್ಮರೂಪಂ ಗಣೇಶಂ ಭಜೇಮ ॥

# ವಚನ ಪರಂಪರೆಯ ಹಿನ್ನೆಲೆಯಲ್ಲಿ ಆಧುನಿಕ ವಚನಕಾರ ಮಹದೇವ ಬಣಕಾರರ ವಚನಗಳು.

ಬಿ. ಸಿ. ವೀರಪ್ಪ ಬ್ಯೆಯ್ಯಂಡಹಳ್ಳಿ. ಬೆಂಗಳೂರು ದಕ್ಷಿಣ ತಾ||.

ಕರ್ಮಾರ್ಜನೆಗಳು ಮನಮುಟ್ಟಿ ಮಾಡಿದಂತಿರಬೇಕೇ ಹೊರತು ಕೇವಲ ಪ್ರಾಣಿ-ಪಕ್ಷಿಗಳ ಶುಷ್ಕ ಆಚರಣೆಯಂತಿರಬಾರದು. ಎನ್ನುವ ಬಣಕಾರರು ಕಪಟ ಬುದ್ಧಿಯ ಸನ್ಯಾಸಿಗಳನ್ನು, ಧರ್ಮಾಂಧರನ್ನು ಆಷಾಢ ಭೂತಿಗಳನ್ನು ಹಾಗೂ ವಿಚಾರ ಶೂನ್ಯರಾದ ಅವಿವೇಕಿಗಳನ್ನು ಎಚ್ಚರಿಸಿರುವ ರೀತಿ ಚಾಟಿಯಿಂದ ಹೊಡೆದಂತಿದೆ.

ಯಾತ್ರೆಗೆ ಹೋದ ನಾಯಿ ಎಂಜಲನ್ನರಸಿತಲ್ಲದೆ
ತೀರ್ಥ ಪ್ರಸಾದವನು ಕೊಂಡುದಿಲ್ಲ.
ಮಾನಹೀನನಾದವನು ಮಂಡೆಯ ಬೋಳಿಸಿದರೇನು ?
ಅಂತರಂಗದಿ ಅರಿವು ಮೂಡುವುದಿಲ್ಲ....................
ಪರತತ್ವವನರುಹಿ, ಪರಧನ, ಪರಸತಿಯ ರತಿಗೆಳೆಸುವ,
ಪರಮಪಾಪಿ ಆಶಾಢಭೂತಿ ಗುರುವಿನ ಮುಖ ತೋರದಿರಯ್ಯಾ
ಉಂಡಮನೆಗೆರಡ ಬಗೆದು, ಲಿಂಗದೊಳು ಜಾತಿಯನು ಕಲ್ಪಿಸಿ
ಅಖಿಲಾಂಡ ಬ್ರಹ್ಮಾಂಡವ ವಂಚಿಪ ಜಾತಿಸೂತಕ ಜಂಗಮನ,
ಮುಖ ತೋರದಿರಯ್ಯಾ.......... ....

"ಆಡುವುದು ಶಿಷ್ಟಾಚಾರ, ಮಾಡುವುದು ಅನಾಚಾರ" ಎಂಬಂತೆ ಗುರುವಾದವನು ಭಕ್ತರಿಗೆ ಮಾರ್ಗದರ್ಶಕನಾಗಿರಬೇಕೇ ಹೊರತು ಮನೆಯ ಜಂತಿಯನ್ನು ಎಣಿಸುವಂತಿರಬಾರದು. ಇಂತಹ ಕುವಿಚಾರಿಗಳ ಒಳಮನಸ್ಸಿನ ತೆವಲುಗಳನ್ನು ಬಯಲಿಗೆಳೆಯುವ ಬಣಕಾರರು; ಅಂತಹವರಿಗೆ ಸನ್ಮಾರ್ಗದಿಚ್ಛೆಯ ಅರಿವುಮೂಡಿಸುವ ಸೂಕ್ತ ಸೂಚನೆಯನ್ನು ನೀಡುತ್ತಾರೆ.

ಲೋಕದ ಅನೇಕ ಬದುಕುಗಳ ನಡುವೆ ಎದ್ದು ಕಾಣುವಂತದ್ದು ಸಾಂಸಾರಿಕ ಬದುಕು. ಅದರಲ್ಲು ಯೌವ್ವನಾವಸ್ಥೆಗೆ ಬಂದ ಗಂಡು, ಹೆಣ್ಣು, ಕೌಟುಂಬಿಕ ಜೀವನದಲ್ಲಿ ಹೊಂದಾಣಿಕೆ ಇಲ್ಲದೆ ಹೇಗೆ ಕಾಮವಿಕಾರಗಳಿಗೆ ಒಳಗಾಗಿ ತೊಳಲುವರೆಂಬುದನ್ನು ಕಂಡ ಕಾರುವಷ್ಟು ತೀಕ್ಷ್ಣವಾಗಿ ವಿಡಂಬಿಸುತ್ತಾರೆ.

ಗರತಿಯೊಬ್ಬಳಿಗೆ ಗಂಡರೆಷ್ಟು ಹೇಳಾ ?
ಕಾವನೊಬ್ಬ ಗಂಡ, ಕಾಮುಕೊಬ್ಬ ಗಂಡ,
ಕರ್ಮಾನುಸಾರೇಣ ಬಂದವನೊಬ್ಬ ಗಂಡನಾದರೆ,
ಗರತಿಯೆಂತಾದಳು ಹೇಳಾ ?....... ಇದು ಗರತಿಯೊಬ್ಬಳ ನಡತೆಯಾದರೆ ;

ಇನ್ನೊಂದು ಕಡೆ

“ಹೊತ್ತು ಗೊತ್ತೆನ್ನದೆಯೆ ಹೊತ್ತಾರೆಯೆದ್ದು,
ತನ್ನ ಪತಿ ಎದ್ದು ಪ್ರಾತನಾಡದ ಮೊದಲು,
ಕದ್ದು ಮನೆಯಿಂದ ಹೊರಬಿದ್ದು,
ಎಲ್ಲೋ ಅಲೆಯುತ್ತಲ್ಲೋ ತಾನುಂಡು,
ಅಂಡಲೆವ ಭಂಡ ಗಂಡನ;...... ........... ........ರೀತಿ ಇಂಥ

ಇಲ್ಲಿ ಬರುವ ಗಂಡ ಹೆಣ್ಣಿನ ವಿಡಂಬನ ನೀತಿಯನ್ನು ಅರ್ಥೈಸುವ ಬದ ವಚನಗಳಲ್ಲಿ ಇರುವ ಹಾಗೆ ಗ್ರಹಿಸುವುದು. ಹೆಚ್ಚು ಅರ್ಥ ಪೂರ್ಣವೆನಿಸುತ್ತ ಶೀಲವಂತಳಾದ, ಪತಿವ್ರತೆ ಎನಿಸಿಕೊಂಡು ಹೆಣ್ಣಿನ ಡೋಲಾಯಮಾನ ಒಂದೆಡೆಯಾದರೆ: ಏಕಪತ್ನಿವ್ರತಸ್ಥನೆನಿಸಿದ ಆದರ್ಶ ಗಂಡಿನ ಬದುಕು ಮತ್ತೊ ತೂಗುಯ್ಯಾಲೆಯಂತೆ ಇರುವುದನ್ನು ನಾವು ಕಾಣುತ್ತೇವೆ. ಹೀಗೆ ಪ್ರಾಪಂ ಸುಳಿಗೆ ಸಿಕ್ಕಿದ ಗಂಡುಹೆಣ್ಣು ಕೇವಲ ಕ್ಷಣಿಕವಾದ ಕಾಮ ಪಿಪಾಸೆಗಳಿಗೆ ಬಲಿಯ ತಮ್ಮ ಜೀವನದಲ್ಲಿ ಹೇಗೆ ಬೆಂಡಾಗುವರು ಎಂಬುದಕ್ಕೆ ಇನ್ನೊಂದು ಉದಾಹ ಯನ್ನು ನೋಡಬಹುದು.

“ಪತಿಯ ನೆನೆವ ಸತಿ ಮನದಲ್ಲಿ ವಿಟನೆ ನೆನೆದೊಡೆ,
ವ್ರತವೆಲ್ಲಿಯದು ಹೇಳಾ?..............
‘ಮಂಗಳ ಗೌರಿಯ ವ್ರತವನ್ನುಮಾಡಿ’
ಪತಿಯನರಿಯದೆ,
ಪತಿಯ ಸಂಗವತೊರೆದ ಸತಿಯು..............
....ಅನ್ಯರಲಿ ಬೆರೆತಂತೆ

ಇಂತಹ ಹೆಣ್ಣಿನ ಬದುಕಿಗೆ ಪರ್ಯಾಯವಾದ ಗಂಡಿನ ನಡವಳಿಕೆ ಅದಕ್ಕೆ ಸಾಟಿಯಂತಿದೆ.

“ಕಣ್ಣೊಳೊಬ್ಬಳ ಕರೆದು, ಮನದೊಳೊಬ್ಬಳ ನೆನೆದು
ಮನೆಯಲೊಬ್ಬಳಿಗೊಡೆಯನಾದ,
ಭಂಡಗಂಡನ ತೆರದಿ............

ಹೀಗ ಬಣಕಾರರು ಪ್ರಾಪಂಚಿಕ ಜೀವನದ ಎಲ್ಲ ಕೊಳಕು ಅನುಭವಗಳ ತಮ್ಮ ಪ್ರತಿಭಾಮೂಸೆಯ ಕುಲುಮೆಯಲ್ಲಿ ಪುಟವಿಕ್ಕಿ, ಅವುಗಳನ್ನು ಹೊಳಪ ಒಡವೆಗಳನ್ನಾಗಿ ಮಾಡಿ ವಚನಗಳ ರೂಪದಲ್ಲಿ ಓದುಗರ ಮುಂದಿರಿಸಿದ್ದಾರೆ.

ಸಿದ್ಧಗಂಗಾ

ನಮ್ಮ ಸಮಾಜದಲ್ಲಿ ಅನಾದಿಕಾಲದಿಂದಲೂ ಆಳವಾದ ಬೇರುಗಳನ್ನು ನಾಟಿ ನಿಂತಿರುವ ಜಾತಿಯ ಭೂತವನ್ನು ಅವರು ದಂಡಿಸಿದ್ದಾರೆ, ಭಾರತೀಯ ಪರಿಸರದಲ್ಲಿ ಈ ಜಾತಿ ಸಂಕರವು ತನ್ನ ಯಾಜಮಾನಿಕೆಯನ್ನು ನಡೆಸುತ್ತಲೇ ಬಂದಿದೆ. ಅನೇಕ ಜನ ದಾರ್ಶನಿಕರು ತಮ್ಮದೇ ಆದ ರೀತಿಯಲ್ಲಿ ಇದರ ತೀವ್ರತೆಯನ್ನು ಇಳಿಸಲಿಕ್ಕಾಗಿ ಸಾಕಷ್ಟು ಪ್ರಯತ್ನಗಳನ್ನು ನಡೆಸಿದ್ದಾರೆ. ಈ ದೃಷ್ಟಿಯಿಂದ ಬಣಕಾರರ ಈ ವಚನವನ್ನು ನೋಡಬಹುದು.

"ಕುಲವಾವುದೆಂಬುದ ಹೇಳಿರೇ,
ಕುಲಮದಕ್ಕೆ ಹೋರುವ ಕುನ್ನಿಗಳಿರಾ,
ಹೊಲೆಯ ಹೆಜ್ಜೆಯನಿಟ್ಟೊಡೆ
ನೆಲಕುಸಿದು ಬಿದ್ದಿತ್ತೇ?

"ಹಾರುವ ನಡೆವೆಡೆ, ದಾರಿಯುದ್ದಕೂ ಚಿನ್ನವೆದ್ದಿತ್ತೆ?" ............ ಈರೀತಿ ಜನತೆಯ ಮನಸ್ಸಿಗೆ ಮುಸುಕಿದ ಮೌಢ್ಯದ ಪರೆಯನ್ನು ಸರಿಸುವ ಪ್ರಯತ್ನ ಮಾಡಿದ್ದಾರೆ. ಜಾತಿ ಸೂತಕಗಳನ್ನು ಪ್ರೋತ್ಸಾಹಿಸುವ ಮನುಸ್ಮೃತಿಯಲ್ಲಿ ಇರಬಹುದಾದ ಕುಬುಡು ಧಾರ್ಮಿಕ ನೀತಿಗಳನ್ನು ಬಲವಾಗಿ ಅಲ್ಲಗಳೆಯುವುದು ಬಣಕಾರರ ಪ್ರಯತ್ನ.

"ಶೂದ್ರನಾದ ರಾಜನ ರಾಜ್ಯದಲ್ಲಿ ವಾಸಿಸಲಾಗದು,
ಅಧರ್ಮಿಗಳಿದ್ದಲ್ಲಿ ಅಟ್ಟಣ್ಣ ಬಾರದು ..............."

ಈ ಮನುಸ್ಮೃತಿಯ ಅರ್ಥವೇನು? ಅಧರ್ಮಿಗಳಾರು? ಶೂದ್ರ ಅಂತ್ಯಜರೆಂಬುದಕ್ಕೆ ಮಾನದಂಡವೇನು? ಬ್ರಹ್ಮವನ್ನರಿಯದ ಬ್ರಾಹ್ಮಣನೊಬ್ಬ ಶೂದ್ರನಾದರೆ ವೇದವನೋದದ ಹಾರುವನೊಬ್ಬ ಬ್ರಹ್ಮವನರಿತ ಅಂತ್ಯಜನೆ ಬ್ರಾಹ್ಮಣನಾಗುತ್ತಾನೆ. ಬಣಕಾರರ ಈ ಬಿಚ್ಚು ನುಡಿಗಳು ನಮ್ಮ ಸಮಾಜದ ಜಾತಿಯ ನೀತಿಗೆ ಹಿಡಿದ ಕನ್ನಡಿಯಾಗಿದೆ.

ಅಧುನಿಕತೆಯು ಮನುಕುಲದ ಔನ್ನತ್ಯವನ್ನು ಒಂದೆಡೆ ಸಾರಿದರೆ ಮತ್ತೊಂದೆಡೆ ಮಾನವೀಕ ಸಂಬಂಧಗಳ ನಡುವಿನ ಬಾಂಧವ್ಯಗಳಲ್ಲಿನ ಬಿರುಕನ್ನು ಪೋಷಿಸಿದಂತಾಗಿದೆ.

"ಎನ್ನಸತಿ ರತಿಸುಖವನರಸುವಳು,
ಸುತನೆನ್ನ ಧನದಾಸೆಗೆ ಹೊದ್ದಿಪನು,
ಬಂಧುಗಳು ಎನ್ನಸುಖದಲ್ಲೆ ಸಂದಿಪರಯ್ಯ ............"

ಇತ್ತೀಚಿನ ದಿನಗಳಲ್ಲಿ ಗಂಡ-ಹೆಂಡತಿ ಮತ್ತು ಮಕ್ಕಳು ನಡುವಿನ ಸಂಬಂಧಗಳು ತಮ್ಮ ವ್ಯಾಪಾರ ಗುಣಗಳಾಗಿಬಿಟ್ಟಿವೆ. ತಮ್ಮ ಆಶೆ-ಆಮಿಷಗಳ ಪೂರೈಕೆಗಾಗಿ ರೂಪುಗೊಂಡ ನಾಟಕೀಯ ನಡವಳಿಕೆಯಾಗಿದೆ ಎಂದರೆ ತಪ್ಪಾಗಲಾರದು, ಎಂಬ ಅಭಿಪ್ರಾಯ ಬಣಕಾರರದು.

# ಯಾರು ದೊಡ್ಡವರು

–ಬಿ.ಮಲ್ಲಿಕಾರ್ಜುನ, ಸೋಮವಾರಪೇಟೆ, ರಾಯಚೂರು –584101

ಅಯ್ಯಾ,

ಅವರು ದೊಡ್ಡವರು ಇವರು ದೊಡ್ಡವರೆಂಬುವಿರಿ
ದೊಡ್ಡವರಾರೆಂಬುದ ತಿಳಿಯಿರಯ್ಯಾ
ಅಧಿಕಾರದಲ್ಲಿದ್ದು ಕೆಳಗಿನವರಿಗೆ
ಕಿರುಕುಳವ ಕೊಡುವವರು ದೊಡ್ಡವರಲ್ಲ ಅವರು,
ಸಿರಿವಂತರಾಗ ಬಯಸಿ ಕೀಳುತನದಿ
ಹಣಸಂಪಾದಿಸುವವರು ದೊಡ್ಡವರಲ್ಲ ಅವರು,
ದೊಡ್ಡ ಜಾತಿಯವರು ನಾವೆಂದು ಕೀಳುಜಾತಿಯರೆಂದು
ಕೀಳುತನದಿ ನಡೆವವರು ದೊಡ್ಡವರಲ್ಲ ಅವರು,
ದೊಡ್ಡದೊಡ್ಡ ಮಾತನಾಡಿ ಜನರನ್ನು ಮರುಳು ಮಾಡಿ
ಮೋಸಮಾಡುವವರು ದೊಡ್ಡವರಲ್ಲ ಅವರು,
ಪವಿತ್ರವಾದ ಖಾದಿ, ಖಾಕಿ, ಕಾವಿ ಉಡುಪನು ಧರಿಸಿ
ಜನಗಳಿಗೆ ವಂಚಿಸುವವರು ದೊಡ್ಡವರಲ್ಲ ಅವರು,
ದೊಡ್ಡ ದೊಡ್ಡ ಗ್ರಂಥವನೆ ಬರೆದು ವೇದಾಂತವನು
ಹೇಳಿ ಹೀನತನದಿ ನಡೆವವರು ದೊಡ್ಡವರಲ್ಲ ಅವರು,
ನಡೆನುಡಿ ಒಂದಾಗಿ ಸತ್ಯಶುದ್ಧರಾಗಿ
ದಯೆ ದಾನ ಧರ್ಮದಿ ನಡೆವವರೇ ದೊಡ್ಡವರು.
ಗೌರವಿಸಬೇಕು ಅಂತಹ ಮಹನೀಯರಿಗೆ,
ಶರಣೆನ್ನಬೇಕು ಅಂತಹ ಶರಣರಿಗೆ,
ಪೂಜಿಸಬೇಕು ಅಂತಹ ಪೂಜ್ಯರಿಗೆ,
ನೋಡಾ ಶ್ರೀಗುರುವೆ ಚನ್ನವೀರ.

ಅಯ್ಯಾ ಧರ್ಮದಿ ನಡೆಯಬೇಕು
ಜನರನು ಮೋಸದಿ ವಂಚಿಸಿ
ಆಸ್ತಿ ಪಾಸ್ತಿ ಗಳಿಸಿದರೇನು
ಅವು ನಮ್ಮೊಂದ ಬರುವವೇನಯ್ಯಾ
ನಾವು ಮಾಡಿದ ಒಳ್ಳೆಯ ಕೃತ್ಯವೊಂದೇ
ಅಮರವಾಗುಳಿಯುವುದು
ಅದಕೆ ಧರ್ಮದಿ ನಡೆಯಬೇಕು.
ನೋಡಾ ಶ್ರೀಗುರುವೆ ಚನ್ನವೀರ.

# ಮಾನಸಿಕ ಶಕ್ತಿಗಳು (ಮುಂದುವರೆದ ಭಾಗ)

ದೇವೇಂದ್ರಪ್ಪ ಮ. ಬಡಿಗೇರ (ನಿವೃತ್ತ ಶಿಕ್ಷಕರು,) ಗೋಕುಲ, ಹುಬ್ಬಳ್ಳಿ

ಕಾಂತ ಶಕ್ತಿಯಿಂದ ರೋಗಗಳನ್ನು ಗುಣಪಡಿಸುವುದು ವೇದನಾ ಪೂರ್ಣವಾದ ...ನ್ಸರ್ ರೋಗಗಳನ್ನೊಳಗೊಂಡು ಇನ್ನೂ ಅನೇಕ ರೋಗಗಳನ್ನು ಕಾಂತಶಕ್ತಿಯು ...ಣಪಡಿಸುವುದು. ಕಾಂತಶಕ್ತಿಯ ಹಿನ್ನೆಲೆಯಲ್ಲಿರುವ ಶ್ವಸನಕ್ರಿಯೆ ವಿಚಾರಶಕ್ತಿ ...ತ್ತು ಕಾರ್ಯಶೀಲತೆಗಳು ಮಹತ್ವದ ಪರಿಣಾಮಗಳು ಉಂಟು. ಉಸಿರು ಮತ್ತು ...ಲಾಲಾರಸಗಳಲ್ಲಿ ಬಹಳಪ್ರಮಾಣದಲ್ಲಿ ಕಾಂತದ್ರವವು ಇರುವುದರಿಂದ ಅದು ವೇದನಾ ...ವಾರಣೆ ಮತ್ತು ರೋಗ ನಿವಾರಣೆ ಗುಣಪಡಿಸುವುದರಲ್ಲಿ ಬಹಳ ಪರಿಣಾಮಕಾರಿ ...ನಿಸಿದೆ. ಶ್ರೀ ಸ್ಟಿಂಗ್ ಎಂಬವರು ರೋಗ ಗುಣಪಡಿಸಲು, ರೋಗಿಯ ಹಾಸಿಗೆಯ ...ಮೇಲೆ ಉಸಿರು ಹೊರಹಾಕುವುದು ಒಂದು ಉಪಾಯವೆಂದು ಹೇಳಿದ್ದಾರೆ. ಬಾವು, ...ಊತ, ಇವುಗಳಿಗೆ ಲಾಲಾರಸದ ಕಾಂತಶಕ್ತಿಯು ವಿಶೇಷ ಪರಿಣಾಮಕಾರಿಯಾದ ...ಕೇವಲ ಹಸ್ತ ಸ್ಪರ್ಶವು ಗುಣಕಾರಿಯಾಗಿದೆ. ಒಬ್ಬವ್ಯಕ್ತಿಯು ತನ್ನ ಕಾಂತತ್ವವನ್ನು ...ಳೆಯಿಸಿಕೊಂಡು ರೋಗಿಯೊಬ್ಬನ ಪೀಡಿತ ದೇಹದ ಮೇಲೆ ಕೈಸವರಿಸಿರಿ ಕ್ರಮೇಣ ...ವನು ರೋಗದಿಂದ ಮುಕ್ತನಾಗುವನು.

ಆಸ್ಟ್ರೇಲಿಯಾದ ಮಿ॥ ಜಾರ್ಜ್‌ಮಿಲ್ಲರ್ ಸ್ಟೀಫನ್ ಎಂಬ ಸುಪ್ರಸಿದ್ಧ ವಿಜ್ಞಾನಿ ...ಂತಶಕ್ತಿಯಿಂದ ಚಿಕಿತ್ಸೆ ಮಾಡುವರು. ತಾವು ರೋಗವನ್ನು ಗುಣಪಡಿಸಿದ ಎಷ್ಟೋ ...ದ್ಭುತ ಉದಾಹರಣೆಗಳನ್ನು ದಾಖಲೆ ಮಾಡಿದ್ದಾರೆ. ಅವರ ವೈದ್ಯಕೀಯ ವ್ಯವಸಾಯ ...ಲ್ಲಿ ಕೇವಲ ಹಸ್ತಸ್ಪರ್ಶದಿಂದಲೇ ತಕ್ಷಣ ರೋಗ ನಿವಾರಣೆಯಾದ ಎಷ್ಟೋ ಉದಾ-...ರಣೆಗಳು ಇರುವವು. ಅವರು ಬ್ಯಾರಿಸ್ಟರರೂ, ಕೆಲಕಾಲ ಹಂಗಾಮಿ ಗೌರ್ನರ್ ಆಗಿ ...ಡವರ ಬಗೆಗೆ ಅವರಿಗೆ ಅಪಾರ ಕರುಣೆಯಿತ್ತು. ಶ್ರೀಮತಿ ಹ್ಯಾಮಕರ್ ಎಂಬುವಳು ...ರೋಗಿ ಒಬ್ಬನನ್ನು ಮೂರುಸಲ ಭೇಟಿಯಾಗಿ ಎಲ್ಲ ಬಗೆಯ ಕ್ಯಾನ್ಸರ್ ಗಡ್ಡೆಗಳನ್ನು ...ದೇಹದ ಅಂತರ್ಗತ ಕ್ಯಾನ್ಸರ್, ಗಡ್ಡೆಗಳನ್ನೂ ದೇಹದ ಅಂತರ್ಗತ ಕ್ಯಾನ್ಸರ್ ರೋಗ ...ನ್ನು ಗುಣಪಡಿಸಿದ್ದಾರೆ.

ದೃಷ್ಟಿ ಕಳೆದುಕೊಂಡ ರೋಗಿಯೊಬ್ಬರ ಕಣ್ಣಿನಮೇಲೆ ಕೈಯಾಡಿಸಿದ ಕೂಡಲೆ ...ಣ್ಣುಗಳಲ್ಲಿ ಕಾಂತಿತುಂಬಿ ಹೊರಚೆಲ್ಲಿ ದೃಷ್ಟಿಉಂಟಾಯಿತು. ಹೃದಯ ಮತ್ತು ...ಪ್ಪುಸರೋಗಿಗಳೂ ಕೂಡಾ ಗುಣಪಟ್ಟಿದ್ದಾರೆ. ಇದು ಅಲ್ಲದೆ ಪಾರ್ಶ್ವವಾಯು, ...ವುಡತನ, ಮೂಕತನ ಇವುಕೂಡಾ ಕಾಂತಶಕ್ತಿಯಿಂದ ಗುಣಪಟ್ಟಿವೆ. ಈ ಶಕ್ತಿ ...ಯನ್ನೂ ತಮ್ಮ ಸ್ವಂತಕುಟುಂಬದಲ್ಲಿ ರೋಗವನ್ನು ತಡೆಯಲು ಮತ್ತು ಗುಣ...ಡಿಸಲು ಉಪಯೋಗಿಸಬಹುದು. ಮನುಷ್ಯನ ದೇಹದಲ್ಲಿ ಯಾವುದೇಬಗೆಯ

ತೊಂದರೆಯಾದ ಚಿನ್ಹೆಗಳು ಕಂಡುಬಂದಾಗ ಕೆಲಕಾಲದವರೆಗೆ ಸುಮ್ಮನೆ ದೇಹ
ಮೇಲೆ ಕೈಯಾಡಿಸಿರಿ ಕೆಲವುನಿಮಿಷಗಳಲ್ಲಿ ರೋಗವನ್ನು ಗುಣಪಡಿಸಬಹುದು. ಸಾ
ಘನವಾದ ರೋಗಗಳನ್ನು ಈ ಪದ್ಧತಿಯಿಂದ ತಡೆಗಟ್ಟಬಹುದು,

ಇದೊಂದು ಪ್ರಥಮೋಪಚಾರದ ಪೆಟ್ಟಿಗೆಇದ್ದಂತೆ. ಕಾಂತಶಕ್ತಿಯನ್ನು ದೇ
ಅಂತರ್ ಭಾಗಕ್ಕೂಮುಟ್ಟಿಸಬಹುದು ಅದುಹೇಗೆ? ಒಂದು ಪಾತ್ರೆ ಅಥವಾ ಬ
ಲಿಯನ್ನು ನೀರುತುಂಬಿ ಕೈಯಲ್ಲಿ ಹಿಡಿದುಕೊಳ್ಳಿ. ನಿಮ್ಮ ಚಿತ್ತದಲ್ಲಿರುವ ಕಾ
ಶಕ್ತಿಯು ಅದರಲ್ಲಿ ಹರಿಯುತ್ತದೆ ಎಂಬಕಲ್ಪನೆ ನಿಮ್ಮ ಕಾಂತಶಕ್ತಿಯನ್ನು
ಮುಖಾಂತರ ಕೆಲಕಾಲದವರೆಗೆ ಹರಿಯಗೊಡಿ ಪಾತ್ರೆಯಲ್ಲಿಯನೀರು ನಿಮ್ಮಕಾ
ಶಕ್ತಿಯ ಪ್ರಭಾವದಿಂದ ರೋಗಿಗೆ ಔಷಧಿಯಾಗುವುದು. ಒಟ್ಟಾರೆ ದೇಹದ
ಕಾಂತಶಕ್ತಿಯು ಕೊರತೆಯಾಗಿ ರೋಗಬಾಧೆಗಳು ಉಂಟಾಗುವುವು ಚಿಕ್ಕಪು
ರೋಗಗಳು ಬಂದರೆ ಎರಡು ಮೂರು ಸಲ ಪ್ರಯೋಗದಿಂದ ಗುಣ ಪಡುತ್ತ
ಒಂದು ಸಲ ಐದುನಿಮಿಷದ ಅವಧಿಯವರೆಗೆ ಉಪಚಾರ ಮಾಡಬಹುದು, ರೋಗ
ಗಂಭೀರ ಸ್ವರೂಪದ್ದಾಗಿದ್ದರೆ ಈಪ್ರಯೋಗವನ್ನು ಹೆಚ್ಚುಸಲ ಮತ್ತು ಮೇಲಿಂ
ಮೇಲೆ ನಿಮಗೆ ಬೇಕಾಗುವುದು.

ಪ್ರಯೋಗದ ವಿಷಯಕ್ಕೆ ಹೆಚ್ಚಿನ ಸೂಚನೆಗಳು ಯಾವುದೇ ಮಾನಸಿ
ಶಕ್ತಿಯನ್ನು ಬೆಳೆಸಲು ಪ್ರಯತ್ನ ನಡೆಯಿಸಿದಾಗ ಇಪ್ಪತ್ತು ಅಥವಾ ಮೂವತ್ತು
ಅಥವಾ ನಲವತ್ತು ನಿಮಿಷಗಳಿಗಿಂತ ಹೆಚ್ಚು ಕಾಲ ಪ್ರಯೋಗ ನಡೆಯಿಸಬ
ರದೆಂದು ಮಿ॥ ಕಾನರ್‌ಗ್ಲಾನ್ ಹೇಳುತ್ತಾನೆ. ಮೊದಲು 5 ರಿಂದ 10 ನಿಮಿ
ಗಳವರೆಗೆ ಪ್ರಾರಂಭಿಸಿದನಂತರ ಕ್ರಮೇಣ ಕಾಲಾವಧಿಯನ್ನು ಬೆಳೆಯಿಸುತ್ತ ಹೋ
ಬೇಕೆಂದು ಅವರ ಅಭಿಪ್ರಾಯ.

ವಿಶ್ವ ಶಕ್ತಿಯು ದೊಡ್ಡ ಆಗರವೇ ಆಗಿ ಲಭ್ಯವಿದೆ ಎಂದು ನಮಗೆ ಬೇಕಾದಷ
ಬೃಹತ್ ಪ್ರಮಾಣದಲ್ಲಿ ನಾವು ಇದರಿಂದ ವೈಯಕ್ತಿಕವಾಗಿ ಕಾಂತಶಕ್ತಿಯನ್ನು ಪ
ಯುಬಹುದೆಂದು ನಾವು ಸದಾನೆನಪಿಡಬೇಕು. ಗಾಢವಾದ ಉಸಿರಾಟದ ಪ್ರಯೋಗಗ
ಮೂಲಕ ನಾವು ಈ ಶಕ್ತಿಯನ್ನು ನಮ್ಮಲ್ಲಿ ಅಳವಡಿಸಿಕೊಳ್ಳಬಹುದು.

ಸ್ವಾಮಿ ವಿವೇಕಾನಂದರು ಹೇಳುತ್ತಾರೆ–

1) ಮನಸ್ಸಿನ ಏಕಾಗ್ರತೆಯೇಜ್ಞಾನದ ಮೂಲವೆಂದು ಹೇಳುತ್ತಾರೆ.
2) ಈ ಜ್ಞಾನದ ಸಂಪಾದನೆ ಬಗೆಗೆ ಉತ್ಸುಕತೆ ಮತ್ತು ಆಸಕ್ತಿ ಇರಬೇಕು.
3) ಕಲ್ಪನಾ ಶಕ್ತಿಯು ಸ್ಫೂರ್ತಿಗೆ ದಾರಿಯಾಗಿದ್ದು ಎಲ್ಲಬಗೆಯ ವಿಚಾರಗಳ
ಕಲ್ಪನಾಶಕ್ತಿಯನ್ನೇ ಅವಲಂಬಿಸಿವೆ.

) ಪರಿಶುದ್ಧತೆ ಸಹನೆ ಮತ್ತು ಸತತೋದ್ಯೋಗದ ಮಹತ್ವವನ್ನು ಅವರು ಒತ್ತಿ ಹೇಳಿದ್ದಾರೆ. ಅಭ್ಯಾಸದಲ್ಲಿ ಒಂದು ದಿನವೂ ಚ್ಯುತಿ ಬಾರದಂತೆ ನೋಡಿಕೊಳ್ಳಬೇಕು. ಹಗಲು ರಾತ್ರಿಗಳ ಸಂಧಿ ಕಾಲವು ಯೋಗ ಸಾಧನೆಗೆ ಉತ್ತಮ ಸಮಯವಾಗಿದ್ದು ನಿದ್ರೆಯಿಂದ ಎಚ್ಚೆತ್ತ ಕೂಡಲೇ ಮತ್ತು ನಿದ್ರೆಗೆ ಶರಣು ಹೋಗುವ ಮುನ್ನ ಅದನ್ನು ಪ್ರಯೋಗಿಸಬೇಕು. ಇಂದ್ರಿಯಗಳ ಪಾಶದಿಂದ ವಿಮುಕ್ತರಾದವರಿಗೆ ಆಧ್ಯಾತ್ಮದ ಬಾಗಿಲು ತೆರೆದಿರುತ್ತದೆ. ಕಲ್ಪನಾ ಶಕ್ತಿಯು ತೀವ್ರವಾಗಿರುವಷ್ಟು ಪ್ರಮಾಣದಲ್ಲಿ ಯೋಗಾಭ್ಯಾಸದ ಪರಿಣಾಮಗಳು ಕಂಡುಬರುತ್ತವೆ. "ಯೋಗವೆಂದರೆ ಮನುಷ್ಯನ ಆತ್ಮ ಮತ್ತು ಪ್ರಕೃತಿಗಳ ಒಂದು ಬಗೆಯ ಮಿಲನ." ○

---

## ಡೊಂಬರ ಆಟ

ಪ. ತಿ. ರಾಮಕೃಷ್ಣಯ್ಯ 'ರಾಕಿ' ಗುಲಬರ್ಗಾ ವಿಶ್ವವಿದ್ಯಾಲಯ

ಈ ಜೀವನ ಒಂದು ಡೊಂಬರ ಆಟ
ಇದು ದೇಹಕೆ ನೀಡುವ ಸಾಧಕ ಪಾಠ
ನೋಡುವ ನಿಮಗಿದು ಮೋಜಿನ ಮಾಟ

ಹರ್ಷದಿ ಕುಣಿಯುವ ಪ್ರೇಮದ ಕೂಟ
ಉಲ್ಲಾಸದಿ ಮೆರೆಯುವ ಮರುಳಾರ ಮಾಟ
ಬದುಕುವ ಆಸೆಗೆ ಈ ಪರದಾಟ

ಆದರೆ.. ಅವ ಕರೆನೀಡಿದಾಕ್ಷಣ 'ಓಡುವ ಕಾಟ
ಆಗ ಉಳಿಯುವುದೊಂದೇ ಶೂನ್ಯದ ನೋಟ
ದಟ್ಟ ಶೂನ್ಯದ ನೋಟ, ಬರೀ ಶೂನ್ಯದ ನೋಟ

ಹೀಗಿದೆ ನೋಡಿ ಡೊಂಬರ ಆಟ
ಈ ಜೀವನ ಒಂದು ಡೊಂಬರ ಆಟ
ಮುಗಿಯದೇ ಸಾಗುವ ಡೊಂಬರ ಆಟ
ಅನುದಿನ ಆಡುವ ಡೊಂಬರ ಆಟ

---

ಸೂಕ್ತಿ:— ನನಗೆ ಮುಪ್ಪೂ ಇಲ್ಲ. ಮರಣವೂ ಇಲ್ಲ. ಎಂಬಂತೆ ಬುದ್ಧಿಶಾಲಿಯಾದವನು ವಿದ್ಯೆಯನ್ನೂ ಧನವನ್ನೂ ಸಂಪಾದಿಸಬೇಕು.

—ಸಮಯೋಚಿತ ಪದ್ಯಮಾಲಿಕಾ.

# ಧರ್ಮ ಮತ್ತು ವಿಜ್ಞಾನ (ಹಿಂದಿನ ಸಂಚಿಕೆಯಿ

ಅರೆಯೂರು ನರಸಿಂಹಮೂರ್ತಿ, ಪ್ರಶಿಕ್ಷಕರು, ಶ್ರೀ ಸಿದ್ಧಗಂಗಾ ಶಿಕ್ಷಕರ ತರಬೇತಿ ಸಂಸ್ಥೆ, ತುಮಕೂರು.

(1991-92ನೇ ಸಾಲಿನಲ್ಲಿ N. C. E. R. T. ಯವರಿಂದ ರಾಷ್ಟ್ರ ಪ್ರಶಸ್ತಿ ಪಡೆದ ವಿಜ್ಞಾನಕ್ಕೆ ಸಂಬಂಧಪಟ್ಟ ಲೇಕನದಿಂದ ಆಯ್ದು ಕ್ರೋಢೀಕರಿಸಿದ ಅಂಶಗಳು)

**ವೈಜ್ಞಾನಿಕ ಮನೋಭಾವ :–**

ಒಂದು ನಿರ್ದಿಷ್ಟ ದೃಷ್ಟಿಕೋನ ಮತ್ತು ಆಚರಣೆಯನ್ನು ಪ್ರಚೋದಿಸುವ ಅಂಶವೇ ಮನೋಭಾವ. ಜ್ಞಾನವನ್ನು ಸಂಪಾದಿಸಲು ಇರುವ ವೈಜ್ಞಾನಿಕಮಾರ್ಗ ಒಂದು ಜೀವಂತ ಮಾರ್ಗ. ಮಾನವನ ಉಳಿವಿಗೆ ಮತ್ತು ಪ್ರಗತಿಗೆ ಅಗತ್ಯವಾದ ನಿತ್ಯಜೀವನದಲ್ಲಿನ ರಾಜಕೀಯ, ಆರ್ಥಿಕ, ಮತ್ತು ನೈತಿಕ ಪ್ರಯತ್ನಗಳಲ್ಲಿ ವೈಜ್ಞಾನಿಕ ವಿಧಾನವನ್ನು ಪೂರ್ಣವಾಗಿ ಬಳಸುವುದು ಅವಶ್ಯಕ. ವೀಕ್ಷಣೆ, ಅಂತಃ ದೃಷ್ಟಿ, ವೈಚಾರಿಕತೆ, ವ್ಯವಸ್ಥಿತ ಸಂಶೋಧನೆ, ಸೃಜನಶೀಲ ಪ್ರೇರಣೆ ಇವೆಲ್ಲಾ ವೈಜ್ಞಾನಿಕ ಮನೋಭಾವಕ್ಕೆ ಸುಸಂಗತ.

ಪ್ರಪಂಚದಲ್ಲಿ ನಮ್ಮ ಹಿರಿಮೆಯನ್ನು ಮತ್ತೆ ಪಡೆಯಬೇಕಾದರೆ ಚರಿತ್ರೆಯ ಕಸದ ಬುಟ್ಟಿಗೆ ನಾವು ಬೀಳದಿರಬೇಕಾದರೆ, ನಮ್ಮ ಕೋಟ್ಯಾಂತರ ಜನರಿಗೆ ತೃಪ್ತಿಯ ಜೀವನವನ್ನು ನೀಡಬೇಕಾದರೆ, ನಮ್ಮ ನಾಗರೀಕತೆಯ ದೀಪ ನಂದದಿರಬೇಕಾದರೆ ನಾವು ಮೊಟ್ಟ ಮೊದಲು ವೈಜ್ಞಾನಿಕ ಮನೋಭಾವಕ್ಕೆ ತೊಡಗಬೇಕು.

**ಧರ್ಮ ಮತ್ತು ವಿಜ್ಞಾನಗಳ ಸ್ಥಾನ:-**

ತೀವ್ರ ಧಾರ್ಮಿಕತೆಯುಳ್ಳ ಹಾಗೂ ಧಾರ್ಮಿಕ ಅಂಧ ಶ್ರದ್ಧೆಯುಳ್ಳ ಜನ ತಮ್ಮಮತಕ್ಕೆ ಅತ್ಯುತ್ತಮ ಮತ್ತು ಧ್ಯೇಯವಾದಿ ಗುಣಗಳನ್ನು ಆರೋಪಿಸಿ ಕೊಳ್ಳುತ್ತಾರೆ ಇತರರ ಮತಧರ್ಮಗಳನ್ನು ಚಾರಿತ್ರಿಕ ದಾಖಲೆಗಳಿಂದ ಮಾತ್ರ ಗುರುತಿಸುತ್ತಾರೆ. ಅವರ ಮತವನ್ನು ಒಪ್ಪಿದರೆ ಪ್ರಪಂಚದಲ್ಲಿರುವ ಅನೇಕ ಧರ್ಮಗಳಲ್ಲಿ ಒಂದೇ ಒಂದು ಉತ್ತಮೋತ್ತಮವಾದುದೆಂದು ನಂಬಬೇಕಾಗುತ್ತದೆ. ಚರಿತ್ರೆಗಳನ್ನು ತಿರುವಿ ಹಾಕಿದಾಗ ಒಂದು ಮತದ ಅನುಯಾಯಿಗಳ ರಕ್ತವನ್ನು ಮತ್ತೊಂದು ಮತದ ಅನುಯಾಯಿಗಳು ಹರಿಸಿರುವುದನ್ನು ನಾವು ಚರಿತ್ರೆಯಲ್ಲಿ ಕಾಣುತ್ತೇವೆ.

ಮತಧರ್ಮ ಅಂತಃದೃಷ್ಟಿಯಿಂದಲೇ ಜ್ಞಾನದ ದಾರಿಯನ್ನು ಹಿಡಿದಿಸುವುದು ಚರಿತ್ರೆಯಿಂದ ಗೊತ್ತಾಗುತ್ತದೆ. ಅಷ್ಟರಮಟ್ಟಿಗೆ ಅದು ಗೀತೆಯಲ್ಲಿ ಹೇಳಿರುವ ಸವಿ-ಜ್ಞಾನ ಜ್ಞಾನದ ದಾರಿಯನ್ನು ಬಿಟ್ಟಿದೆ. ಮತ್ತು ಅಷ್ಟರಮಟ್ಟಿಗೆ ಮನುಷ್ಯನಿಗೆ ಅಡ್ಡಿ-

ಗಳನ್ನು ತಂದೊಡ್ಡಿದೆ. ಆದರೆ ಅರಿವನ್ನು ಮಾತ್ರ ಅರಿಸಿಕೊಂಡು ಅದು ಅಂತಃದೃಷ್ಟಿ ಬೆಳಕಿನಿಂದ ಸಮರಸವಾಗದಿದ್ದರೆ ಅಂತಹ ವಿಜ್ಞಾನವು ಅಪಾಯಕಾರಿಯಾಗಿ ಮುಂದೆ ಮಾನವನ ಉಳಿವು-ಬೆಳವಣಿಗೆಗೆ ತಡೆಯೊಡ್ಡ ಬಹುದೆಂಬುದೂ ನಮಗೆ ಕಾಣುತ್ತದೆ.

## ಮತಧರ್ಮಗಳ ದೃಷ್ಟಿಕೋನ

ಈ ಜಗತ್ತು ಬಂದುದೆಲ್ಲಿಂದ ? ಹೋಗುವುದೆಲ್ಲಿಗೆ ? ಎಂಬುದನ್ನು ಮೊದಲು ತಿಳಿಯಬೇಕಾಗುತ್ತದೆ. ಈ ಪ್ರಶ್ನೆಗಳಿಗೆ ಅನೇಕ ಉತ್ತರಗಳನ್ನು ಕೊಡಲಾಗಿದೆ. ಪ್ರಾಚೀನ ಗ್ರೀಸ್‌ನ ಎಲಿಯಾಟಿಸ್ ತತ್ವಜ್ಞಾನಿಗಳು ಈ ಜಗತ್ತು ಬಂದುದೆಲ್ಲಿಂದಲೂ ಅಲ್ಲ. ಇದು ಎಲ್ಲಿಗೂ ಹೋಗುವುದಿಲ್ಲ. ಇದೆಲ್ಲ ಮಾಯೆ ಎಂದು ನಂಬಿದ್ದರು. ಈ ತತ್ವಜ್ಞಾನಿಗಳಲ್ಲೊಬ್ಬ ಸೇನೋ ಮೇಧಾವಿ ಗಣಿತಶಾಸ್ತ್ರಜ್ಞನಾಗಿದ್ದ. ಈ ಜಗತ್ತಿನ ಎಲ್ಲಾ ಬದಲಾವಣೆ, ಅಭಿವೃದ್ಧಿ ಮತ್ತು ವಿಕಾಸಗಳ ಮೂಲದಲ್ಲಿನ ಸಾಮಾನ್ಯ ಭಾವನೆ ಕೇವಲ ಒಂದು ಭ್ರಮೆ ಎಂದು ಅವನ್ನು ಸಾಧಿಸಿ ತೋರಿಸಿದ. ಆದರೆ ಈಗ ನಮ್ಮ ಕಾಲದಲ್ಲಿ ನಮ್ಮ ಅರಿವಿನ ವ್ಯಾಪ್ತಿಯಲ್ಲಿ ಕ್ವಾಂಟಂ ಸಿದ್ಧಾಂತದಿಂದಾಗಿ ಸೇನೋವಿನ ಅಸಂಗತೋಕ್ತಿಗಳ ಮೂಲದಲ್ಲಿರುವ ಸಾಂಪ್ರದಾಯಿಕ ಭೌತಶಾಸ್ತ್ರದ ಸ್ವಯಂ ಸಿದ್ಧಾಂತಗಳೇ ನುಚ್ಚು ನೂರಾಗಿವೆ.

ಇದೇ ರೀತಿಯ ಅಂದರೆ ಬೇರೊಂದು ತತ್ವದ ಪ್ರಕಾರ ಈ ಜಗತ್ತು 'ಮಾಯೆ' ಅಲ್ಲದಿದ್ದರೂ ಅದು ಸರ್ವತಂತ್ರ ಸ್ವರೂಪನಾದ ಪರಮೇಶ್ವರನ ಶೈಥಿಲ್ಯದಿಂದಾದುದು. ಮನುಷ್ಯನು ಈ ಜಗತ್ತನ್ನು ತಿರಸ್ಕರಿಸಬೇಕು. ಸಾವಿನಿಂದ ದೊರೆಯುವ ಬಿಡುಗಡೆ ಬೇಗನೇ ಸಿಗಲಿ ಎಂಬ ಆಸೆ ಭರವಸೆಗಳನ್ನಿಟ್ಟು ಕೊಳ್ಳಬೇಕು. ಇಂಥವೇ ನಿಲುವುಗಳು ಭಾರತೀಯ ಸಾಂಪ್ರದಾಯಿಕ ಲಕ್ಷಣಗಳೂ ಹೌದು

ಶತಮಾನಗಳ ಕಾಲದಿಂದ ಹೆಪ್ಪುಗಟ್ಟಿರುವ ಜಗತ್ ತಿರಸ್ಕಾರ ದೃಷ್ಟಿಕೋನಗಳ ಸಾರಾಂಶವನ್ನು ಶ್ವೈಟ್ಸರನು ಕೊಟ್ಟಿದ್ದಾನೆ. ಮನುಷ್ಯನು ತನ್ನ ಜೀವನದ ಅನುಭವಗಳಿಂದ ಈ ಬದುಕು ಅರ್ಥವತ್ತಾದುದು ಎಂದು ತಿಳಿದು ತನ್ನಲ್ಲಿ ಈ ಬದುಕು ಪೂರ್ಣತೆಯನ್ನು ಪಡೆಯಲು ಯತ್ನಿಸುತ್ತಾ ತನ್ನ ಪ್ರಭಾವ ಇರುವ ಕ್ಷೇತ್ರದಲ್ಲಿ ಬದುಕನ್ನು ಉಳಿಸಿ ಬೆಳೆಸುವ ಪ್ರಯತ್ನ ಜಗತ್ ಸ್ವೀಕಾರ ದೃಷ್ಟಿಕೋನದ ಲಕ್ಷಣ. ಇದಕ್ಕೆ ವಿರುದ್ಧವಾಗಿ ತನ್ನ ಬದುಕಿನ ಅನುಭವ, ಜಗತ್ತಿನಲ್ಲಿ ಅದರ ಬೆಳವಣಿಗೆ, ಇವು ದುಃಖದಾಯಕವಾದದ್ದು, ಅರ್ಥವಿಲ್ಲದ್ದು, ಎಂದು ನಂಬಿ ಬದುಕನ್ನು ಬೆಳೆಸಲು ಯಾವ ಪ್ರಯತ್ನವನ್ನೂ ಮಾಡದೆ ಜೀವನ ಸ್ಥಿತಿಗತಿಗಳನ್ನೂ ಉತ್ತಮಗೊಳಿಸುವ ಎಲ್ಲಾ ಚಟುವಟಿಕೆಗಳನ್ನು ನಿಲ್ಲಿಸುವುದು ಜೀವನ ತಿರಸ್ಕಾರ ಇಲ್ಲವೇ ಜೀವನ ವಿಮುಖತೆಯ ಲಕ್ಷಣ.

ಎಲ್ಲಾ ಮತಧರ್ಮಗಳೂ, ಇಲ್ಲವೇ ಯಾವುದೇಒಂದು ಮತಧರ್ಮ ಈ
ದೃಷ್ಟಿಕೋನಗಳಲ್ಲಿ ಒಂದನ್ನು ಆದರಲ್ಲಿಯೂ ಜೀವನ ವಿಮುಖತೆಯನ್ನು ದೃಢ
ಹಿಡಿದಿದೆ ಎಂದು ನಂಬುವುದು ದೊಡ್ಡ ತಪ್ಪಾಗುತ್ತದೆ. ಸದಾನೆನಪಿಗೆ ಬರುವ ವ
ಮೃದು ಮಧುರಸಾಲುಗಳು ನೆನಪಿಗೆ ಬಂದಾಗಲೆಲ್ಲ ಕವಿ ಹೃದಯದ ಜರೋಮ
ಪಾಪ ಪ್ರಜ್ಞೆ ಕಾಡುತ್ತಿದ್ದುದನ್ನು ನೆನೆಸಿಕೊಂಡರೆ, ಸ್ವಿಸ್ ಸರೋವರಗಳ ಸೌಂ
ದಿಂದ ಮರುಳಾಗಬಾರದೆಂದು ಬರ್ನಾರ್ಡನು ಕಂಡು ಕೊಂಡಿದ್ದನ್ನು ನೆನಪಿಸಿಕೊ
ಚರ್ಚ್ ಸಂಗೀತದ ಮೋಹದ ಮಂತ್ರಶಕ್ತಿಯಬಗ್ಗೆ ಗ್ರೆಗರಿ ಮತ್ತು ಅಗಸ್ಟಿ
ಭಯಗೊಂಡಿದ್ದನ್ನು ನೆನಪಿಸಿಕೊಂಡರೆ, ಅರಣ್ಯ ಪಿತೃಗಳು ಜೋಡಿಯಾದ ನಿ
ಪ್ರದೇಶದಲ್ಲಿ ತಮ್ಮ ದೇಹದಂಡನೆ ಮಾಡಿ ಕೊಂಡಿದನ್ನು ನೆನೆಸಿಕೊಂಡರೆ-ಹಾಗೆ
ಜೀಸಸನು ಚಿಕ್ಕಮಕ್ಕಳನ್ನು ಕಣಿವೆಗಳ ಲಿಲ್ಲಿಹೂವುಗಳನ್ನು ಪ್ರೀತಿಸಿದುದನ್ನೂ ನೆ
ಕೊಳ್ಳಬೇಕು. ತಂದೆ ಸೂರ್ಯ ಅಣ್ಣ ಗಾಳಿಗಳಬಗ್ಗೆ ಅಸ್ಸಿಸ್ಸಿನಗರದ ಫ್ರಾನ್ಸಿ
ಪವಿತ್ರ ಗೀತೆಗಳಿಗೂ, 'ಮಾತಾ ಮೇದಿನಿ' 'ತಾತಮಾರುತ'ಗಳಿಗೆ ಬರದೆ ಭರ್ತೃ
ಪದ್ಯಗಳಿಗೂ, ಇರುವ ಸಾಮ್ಯ ಆಶ್ಚರ್ಯಕರವಾದದ್ದು. ಹೀನಯಾನ ಪ್ರಾರ್ಥ
ಮಾಲೆಯಲ್ಲಿ ದುಃಖದ ವ್ಯಾಪಕತೆಯನ್ನು ಒತ್ತಿ ಹೇಳಿದರೆ, ಬೌದ್ಧ ಉಪಾಖ್ಯಾನ
ಬುದ್ಧ ಯಾವ ಉಪದೇಶವನ್ನು ನೀಡಿದೆ ಕರ್ಮಬಂಧವನ್ನು ಎತ್ತಿಹಿಡಿದುದನ್ನು ಉ
ಸಿದೆ. ನಿಮ್ಮ ಈ ಜಗತ್ತು ಸೌಂದರ್ಯದಿಂದ ತುಂಬಿದೆ ಎಂಬ ಸಂದೇಶ ಆದೆಂದು ವ
ಕಶ್ಯಪನು ಸರಿಯಾಗಿಯೇ ಅರ್ಥಮಾಡಿಕೊಂಡಿದ್ದಾನೆ. ಹಿಂದೂಗಳಲ್ಲಿ ಸನ್ಯಾಸ,
ದಂಡನೆಗಳ ಸಂಪ್ರದಾಯಗಳಿರುವಹಾಗೆಯೇ ತನ್ನ ದೇಹದಲ್ಲಿರುವ ಭಗವಂತನ
ಹಿಂಸೆಮಾಡುವ ಮೂಢಜನರನ್ನು ಶ್ರೀಕೃಷ್ಣನು ಖಂಡಿಸಿರುವುದೂ ನಿಜ ಇ

(ಕಳೆದ ಸಂಚಿಕೆಯಿಂದ)

# ಶಂಕರಾಚಾರ್ಯರು - ಬಸವಣ್ಣನವರು

ಡಾ|| ಬಿ. ಎಸ್. ಸ್ವಾಮಿ, ವಿಜಯನಗರ, ಬೆಂಗಳೂರು.

ಬಸವಣ್ಣ ಹಾಗೂ ಶಂಕರಾಚಾರ್ಯ ಇಬ್ಬರೂಐತಿಹಾಸಿಕ ವ್ಯಕ್ತಿಯಾಗಿದ್ದರು. ಅವರ ಸರಿಯಾದ ಜೀವನಚರಿತ್ರೆಗಳು ಸಿಗದೆಪವಾಡಗಳ ಮಳೆಗರೆದು ಕವಿಗಳು ಚಿತ್ರಿಸಿ ಕಾವ್ಯಗಳನ್ನು ರಚಿಸಿದ್ದಾರೆ. ಇವುಗಳ ಆಧಾರದ ಮೇಲೆ ಅವರ ಜೀವನವನ್ನು ಸ್ವಲ್ಪ ತಿಳಿದುಕೊಳ್ಳಬಹುದು. ಬಸವಣ್ಣನನ್ನು ಅವತಾರ ಪುರುಷ ಎಂದು ಕವಿಗಳು ಹೊಗಳಿ ಪುರಾಣಗಳನ್ನು ರಚಿಸಿದರು. ಆದರೆ ಅವರ ಸರಿಯಾದ ಜೀವನ ತಿಳಿದುಕೊಳ್ಳಲು ಅವರ ಹಾಗೂ ಇನ್ನಿತರ ವಚನಕಾರರ ವಚನ ಸಾಹಿತ್ಯ ಸಾಕಷ್ಟು ನಿಜಾಂಶ ತಿಳಿದು ಕೊಳ್ಳಲು ಸಾಧನವಾಗಿದೆ ಹರಿಹರನ ಬಸವರಾಜರಗಳೆ, ಪಾಲ್ಕುರಿಕೆಸೋಮನಾಥನ ಬಸವಪುರಾಣ, ಬಸವದೇವರ ಬಸವೇಶ್ವರ ಪುರಾಣ, ಭೀಮಕವಿಯ ಬಸವಪುರಾಣ, ಮುಂತಾದುವುಗಳು ಬಸವಣ್ಣನವರ ಬಗೆಗೆ ರಚಿಸಿದ ಕಾವ್ಯಗಳು.

ಹಾಗೆಯೇ ಶಂಕರಾಚಾರ್ಯರ ಚರಿತ್ರೆಯೂ ಕೂಡ ಕವಿಗಳು ರಚಿಸಿದ ಕಾವ್ಯ ಗಳಿಂದಲೇ ತಿಳಿಯಬೇಕಾದೆ. ಇವರ ಜೀವನವೂ ಹಲವಾರು ಪವಾಡಗಳ ಮಯವಾಗಿದೆ. ಬಸವಣ್ಣನವರು ಸರಳವಾಗಿ, ಸುಲಭವಾಗಿ ತಮಗಾದ ಜೀವನಾನುಭವಗಳನ್ನು ವಚನವೆಂಬ ಹೊಸ ಸಾಹಿತ್ಯ ಪ್ರಕಾರದಲ್ಲಿ ಸೃಷ್ಟಿಸಿದರು. ತಾವೂ ಸಹ ನುಡಿದಂತೆ ನಡೆದರು.

ಶಂಕರಾಚಾರ್ಯರು 200ಕ್ಕೂ ಹೆಚ್ಚು ಗ್ರಂಥಗಳನ್ನು ರಚಿಸಿದ್ದಾರೆ. ಭಾಷ್ಯಗಳು ಸ್ತೋತ್ರಗಳು ಪ್ರಕರಣ ಗ್ರಂಥಗಳು, ಪ್ರಸ್ಥಾನತ್ರಯ ಭಾಷ್ಯ, ಇತರ ಗ್ರಂಥಗಳ ಭಾಷ್ಯ ಹತ್ತು ಪ್ರಧಾನ ಉಪನಿಷತ್ತುಗಳ ಮೇಲೆ ಭಾಷ್ಯ ಬರೆದಿದ್ದಾರೆ. ವಿವೇಕಚೂಡಾಮಣಿ ಪ್ರಪಂಚಸಾರ, ಸೌಂದರ್ಯಲಹರಿ, ಶಿವ, ವಿಷ್ಣು, ಸ್ತೋತ್ರಗಳನ್ನು ಸಹ ಬರೆದಿದ್ದಾರೆ.

ಶಂಕರಾಚಾರ್ಯರು ನಂಬೂದರಿ ಬ್ರಾಹ್ಮಣರಾಗಿ ಹುಟ್ಟಿ ಹಾಗೆಯೇ ಮುಂದು ವರಿದರೆ ಬಸವಣ್ಣನವರು ಬ್ರಾಹ್ಮಣರಾಗಿ ಹುಟ್ಟಿ ವೀರಶೈವ ಮತಾವಲಂಬಿಯಾದರು. ಬಸವಣ್ಣ, ಗಂಗಾಂಬಿಕೆ, ನೀಲಾಂಬಿಕೆ ಎಂಬ ಇಬ್ಬರು ಪತ್ನಿಯರನ್ನು ಹೊಂದಿ, ಶರಣ ಧರ್ಮವನ್ನು ಅನುಸರಿಸಿದರೆ, ಶಂಕರಾಚಾರ್ಯರು ವಿವಾಹವಾಗದೆ ಸನ್ಯಾಸದಿಂದ ಮೋಕ್ಷ ಪಡೆದವರು. ಬಸವಣ್ಣ ಕಲ್ಯಾಣದ ಬಿಜ್ಜಳನ ಆಸ್ಥಾನದಲ್ಲಿ ಅನೇಕ ಪದವಿ ಗಳನ್ನು ಪಡೆದು ಮಂತ್ರಿಯಾಗಿ ಸಮಾಜಸೇವೆಯನ್ನು ಮಾಡಲು ಟೊಂಕಕಟ್ಟಿದವರು. ಆದರೆ ಶಂಕರಾಚಾರ್ಯರು ಯಾರ ಆಶ್ರಯವನ್ನು ಬಯಸದೆ ಆಶ್ರಮವಾಸಿಗಳಾಗಿ ಧಾರ್ಮಿಕ ಪ್ರಚಾರ ಕೈಕೊಂಡವರು.

ಶಂಕರಾಚಾರ್ಯರು ಕೇರಳದ ಕಾಲಟ (ಕಾಲಡಿ)ಯಲ್ಲಿ ನಂಬೂದರಿ ಬ್ರಾಹ
ದಂಪತಿಗಳಾದ ಶಿವಗುರು–ಸತಿದೇವಿಯರ ಮಗನಾಗಿ ಜನಿಸಿದರು.

ಬಸವಣ್ಣ ಬಿಜಾಪುರ ಜಿಲ್ಲೆಯ ಇಂಗಳೇಶ್ವರ ಬಾಗೇವಾಡಿಯಲ್ಲಿ ಶೈವ ಬ್ರಾಹ್ಮಣ
ಮಾದಿರಾಜ-ಮಾದಾಂಬೆಯರ ಮಗನಾಗಿ ಜನಿಸಿದರು. ಚಿಕ್ಕಂದಿನಲ್ಲಿಯೇ ಪವಾ
ಮೆರೆದವರು ಇಬ್ಬರೂ ಸಹ. ಬಸವಣ್ಣ ಒಮ್ಮೆ ಜೊತೆಗಾರರೊಡನೆ ಆಟವಾಡುವಾ
ಒಬ್ಬ ಸ್ನೇಹಿತ ಕಾಲು ಜಾರಿ ಬಾವಿಗೆಬಿದ್ದ. ಬಸವಣ್ಣ ಆತನನ್ನು ಮೇಲೆತ್ತಿ ತಂದ
ಅಷ್ಟರಲ್ಲಿ ಹುಡುಗರು ಅವರ ತಂದೆ-ತಾಯಿಯರಿಗೆ ಹೇಳಿ ಕರೆತಂದಿದ್ದರು. ತಂದೆ-ತಾ
ಮಗು "ಯಾರು ನಿನ್ನನ್ನು ನೀರಿಗೆ ನೂಕಿದವರು?" ಎಂದಾಗ 'ನಾನೇ ಜಾರಿ ಬಿ
ಬಸವಣ್ಣ ನನ್ನನ್ನುಮೇಲೆತ್ತಿತಂದ' ಎಂದಾಗ ಮಿಕ್ಕ ಮಿತ್ರರೆಲ್ಲಾ ಆತನನ್ನು ಹೊಗಳಿದ

ಒಮ್ಮೆ ಶಂಕರಾಚಾರ್ಯರು ದಟ್ಟ ದರಿದ್ರ ಹೆಂಗಸೊಬ್ಬಳ ಮನೆಗೆ ಭಿಕ್ಷೆ
ಹೋದಾಗ ಆಕೆ ತನ್ನ ಬಡತನವನ್ನು ತೋಡಿಕೊಂಡಳು. ಆಗ ಶಂಕರ ಲಕ್ಷ್ಮೀ ಸ್ತೋ
ಮಾಡಲು ಮನೆಯಲ್ಲಿ ಚಿನ್ನದ ನೆಲ್ಲಿಕಾಯಿ ತುಂಬಿತು.

ಬಸವಣ್ಣನ ಗುರು ಕೂಡಲ ಸಂಗಮದಲ್ಲಿದ್ದ ಜಾತವೇದ ಮುನಿಗಳು. ಅವರಿಂ
ವಿದ್ಯಾಭ್ಯಾಸ ಮಾಡಿದ.

ಶಂಕರಾಚಾರ್ಯರ ಗುರುಗಳು ಗೋವಿಂದ ಭಗವತ್ಪಾದರು ಇವರು ಶಂಕರನಿ
ಅದ್ವೈತ ವೇದಾಂತ ಸಿದ್ಧಾಂತವನ್ನು ಉಪದೇಶಿಸಿದರು. ಇವರು ನರ್ಮದಾ ನದಿತೀರ
ಓಂಕಾರನಾಥ ದೇವಾಲಯದ ಪಕ್ಕದ ಗುಹೆಯಲ್ಲಿ ಸಾಧನೆ ಮಾಡುತ್ತಿದ್ದರು.

ಬಸವಣ್ಣನ ಬುದ್ಧಿವಂತಿಕೆಯನ್ನು ನೋಡಿ ಬಿಜ್ಜಳನ ಸಿದ್ಧರಸ ಮಂತ್ರಿಗಳ
ಕಲ್ಯಾಣದ ಅರಮನೆಯಲ್ಲಿ ಕರಣಿಕನಾಗಿ ನೇಮಿಸಿಕೊಂಡರು. ಶಂಕರಾಚಾರ್ಯರು
ಯಾರ ಹಂಗಿಗೂ ಹೋಗದೆ ಸನ್ಯಾಸತ್ವ ಸ್ವೀಕರಿಸಿ ಜ್ಞಾನ ಸಂಪಾದನೆ ಮಾಡುತ್ತಾ
ಕಾಲವನ್ನು ದೇಶಪರ್ಯಟನೆಯಲ್ಲೇ ಕಳೆಯಲು ಅನುವಾದರು. ಅನೇಕ ಪಂಡಿತರನ್ನು
ವಾದದಲ್ಲಿ ಸೋಲಿಸಿ ಸಾಕ್ಷಾತ್ ಸರಸ್ವತಿಯ ಕೃಪಾಕಟಾಕ್ಷವನ್ನು ಪಡೆದರು.

ಬಸವಣ್ಣ ಇದ್ದ ಜಾಗಕ್ಕೇ ಅನೇಕ ಶರಣರು ಅವರ ಕಾರ್ಯ; ಕಾಯಕ
ದಾಸೋಹ ಮುಂತಾದ ವಿಷಯಗಳನ್ನು ಕೇಳಿ ತಿಳಿದು ಕನ್ಯಾಕುಮಾರಿಯಿಂದ
ಕಾಶ್ಮೀರದವರೆಗೆ ತಮಿಳುನಾಡು, ಆಂಧ್ರ, ಕೇರಳ, ಕಾಶ್ಮೀರ, ಅಫಘಾನಿಸ್ಥಾನ,
ಒರಿಸ್ಸಾ, ಮಹಾರಾಷ್ಟ್ರಗಳಿಂದ ಬಂದು ಶರಣರಾದರು. ಆದರೆ ಶಂಕರಾಚಾರ್ಯರು
ಕಂಚಿ, ಕಾಶಿ, ಪೂರಿ, ಜಗನ್ನಾಥ, ಕಾಶ್ಮೀರ, ಶೃಂಗೇರಿ, ಮುಂತಾದೆಡೆ ಹೋಗಿ ತಮ್ಮ
ಪೀಠವನ್ನು, ಮಠವನ್ನು ಸ್ಥಾಪಿಸಿ ಜನರ ಮನವನ್ನು ಸೂರೆಗೈದರು. ಅನೇಕ ಶಿಷ್ಯರನ

ಡಿದರು. ಸುರೇಶ್ವರಾಚಾರ್ಯ, ಪದ್ಮಾಚಾರ್ಯ, ಹಸ್ತಮಲಕಾಚಾರ್ಯ, ತ್ರೋಟಕಾ ಚಾರ್ಯರೇ ಮುಂತಾದವರು. ಆದರೆ ಬಸವಣ್ಣನವರು ಮಠ ದೇಗುಲಗಳನ್ನು ನಿರ್ಮಿಸದೆ, ಶಿಷ್ಯರೆಂದೂ ಸ್ವೀಕರಿಸಲಿಲ್ಲ. ಎಲ್ಲರನ್ನು ಶರಣರನ್ನಾಗಿ ಮಾಡಿದರು. ಎಲ್ಲರೂ ಬಸವಣ್ಣನ ಅನುಯಾಯಿಗಳಾದರು. ಅಷ್ಟೇ ವಚನ ಸಾಹಿತ್ಯ ಸೃಷ್ಟಿಸಿ ಜನರನ್ನು ಸನ್ಮಾರ್ಗಕ್ಕೆಳೆಯಲು ಅನುವಾದರು.

ಶಂಕರಾಚಾರ್ಯರರು ಭಾಷ್ಯ ಬರೆಯಲು ಕಾವ್ಯರಚಿಸಲು ಏಕಾಂತವಾದ, ಪ್ರಶಾಂತವಾದ ಸ್ಥಳಗಳನ್ನು ಕಾಡು, ಗವಿಗಳನ್ನು ಹುಡುಕಿಕೊಂಡು ಬದರಿ, ಋಷಿಕೇಷ ಹೋಗಿ ರಚಿಸಿದರೆ ಬಸವಣ್ಣನವರು ಜನರ ಮಧ್ಯೆಯೇ ಇದ್ದು ಅವರ ಸಮಸ್ಯೆಗಳನ್ನು ಅರಿತು ಓರೆ ಕೋರೆಗಳನ್ನು ತಿದ್ದಲು ವಚನ ಸಾಹಿತ್ಯವನ್ನು ಸೃಷ್ಟಿಸಿದರು.

ಬಸವಣ್ಣ ಬಡತನ ಹೋಗಲಾಡಿಸಲು ಕಾಯಕ ಮಾಡಬೇಕು, ಅದೇ ಉದ್ಯೋಗ, ಅದು ಯಾವುದೇ ಇರಬಹುದು, ಕಾಯಕದಿಂದ ನಾಯಕರಾಗಬಹುದು ಎಂದು ಸಾರಿದರು.

ಬಸವಣ್ಣ ಪರಂಪರೆಯನ್ನು ಪ್ರತಿಭಟಿಸಿ ವೈಚಾರಿಕ ಪ್ರಜ್ಞೆಯಿಂದ ಜಾಗೃತ ಗೊಳಿಸಿದರೆ, ಶಂಕರರು ಪರಂಪರೆಯನ್ನು ಬೆಳೆಸಿಕೊಂಡು, ಉಳಿಸಿಕೊಂಡು ಬಂದು ಜನರ ಜಾಗೃತಿ ಮಾಡಿದರು. ಜಾತೀಯತೆಯ ನಿರ್ಮೂಲನಕ್ಕೆ ಕಲ್ಪನೆ ಮಾಡಿದರು.

ಬಸವಣ್ಣ ಮೊದಲ ಸಮಾಜವಾದಿ ಎಂದರೆ ತಪ್ಪಾಗಲಾರದು. ಕಾಯಕಮಾಡ ಬೇಕು. ಅದರಿಂದ ದಾಸೋಹ ಮಾಡಬೇಕು. ಎಂದರೆ ಹಂಚಿಕೊಂಡು ತಿನ್ನಬೇಕು, ಸಂಗ್ರಹ ಮನೋಭಾವವನ್ನು ತೊರೆಯಬೇಕು. ಎಂದುಜನರಲ್ಲಿ ಅರಿವು ಮೂಡಿಸಿದರು. ಶಿವಶರಣರು ಜಂಗಮರೆಂದರೆ ಇವರಿಗೆ ಪ್ರಾಣ. ಎನಗಿಂತ ಕಿರಿಯರಿಲ್ಲ. ಶಿವಶರಣರಿಗಿಂತ ಹಿರಿಯರಿಲ್ಲ. ಎಂಬುದು ಈತನ ವಿಶಾಲ ಮನೋಭಾವವನ್ನು ಸೂಚಿಸುತ್ತದೆ. ದೀನ ದಲಿತರ ಮೇಲೆ ಅನುಕಂಪ ಪ್ರದರ್ಶಿಸಿ ಮಾಡಬಾರದು. ಮೂಢನಂಬಿಕೆಗಳನ್ನು ಒಪ್ಪಬಾರದು. ಅಸ್ಪೃಶ್ಯತೆಯನ್ನು ತೊಡೆದು ಹಾಕಬೇಕು. ಜಾತೀಯತೆಯನ್ನು ಬೇರು ಸಹಿತ ಕಿತ್ತು ಹಾಕಬೇಕು. ಎಂಬುದು ಬಸವಣ್ಣನವರ ತತ್ವಗಳಲ್ಲಿ ಕಂಡುಬರುತ್ತದೆ,

ಅಸ್ಪೃಶ್ಯನಾದ ಕಂಬಳಿ ನಾಗದೇವನ ಮನೆಯಲ್ಲಿ ಬಿನ್ನಹ ತೀರಿಸಿಕೊಂಡು ಬರುವಾಗ ಕುಹಕಿಗಳು ಈ ವಿಷಯವನ್ನು ಬಿಜ್ಜಳನಲ್ಲಿ ತಿಳಿಸುತ್ತಾರೆ. ಆಗ ರಾಜ ವಿಚಾರಣೆ ಮಾಡುವಾಗ ಎಲ್ಲರ ಮೈನಲ್ಲೂ ಹರಿಯುವುದು ರಕ್ತವೇ ಎಂದ ಬಸವಣ್ಣ. ಬಿಜ್ಜಳ- ಆತನ ಮೈನಲ್ಲಿ ಅಮೃತವಿದೆಯೇ ? ಎಂದಾಗ ಬಸವಣ್ಣ ಆತ ಶರಣ ಆತನ ಮೈಯಲ್ಲಿ ಅಮೃತವಿದೆ ಎಂದುಆತನ ಬೆರಳನ್ನು ಹಿಚುಕಿದಾಗ ಅಮೃತ ಸುರಿಯುವುದು.

ವೃತ್ತಿವಾಚಕಗಳಲ್ಲದೆ ಜಾತಿವಾಚಕಂಗಳಲ್ಲ ನೋಡಾ.
ಶಿವಭಕ್ತಿರಹಿತ ವೃತ್ತಿಯದು ಬರಿಯವೃತ್ತಿ (ಕಾರ್ಯ)—
ಯೆನಿಸಿತ್ತಲ್ಲದೆ, ಶರಣಗೆಯ್ವ ಪವಿತ್ರ ಕಾಯಕವೆನಿಸದು ನೋಡಾ.
ಆವ ವೃತ್ತಿಯಾದಡೇನು - ಈವೃತ್ತಿ ಆವಸ್ಥಲದಲ್ಲಿ
ನೆಲಸಿ ಮಾಡಿದಡೇನು ? ತಾನಿರ್ಪಲ್ಲಿ ಶಿವಭಕ್ತಿ ವಹಿಸಿ
ಮಾಳ್ಪ ಕಾರ್ಯವೆಪರಮ ಪವಿತ್ರಕಾಯಕವೆನಿಸಿತ್ತು ನೋಡಾ.
ಇಂತಪ್ಪ ಶುದ್ಧಕಾಯಕ ನಡೆಸುತಿಪ್ಪ ಶಿವಜ್ಞಾನಿ
ಲಿಂಗಭಕ್ತಂಗೆ ನಿಂತಲ್ಲಿಯೆ ಶಿವಪದಪ್ರಾಪ್ತವಾಯಿತ್ತು ನೋಡಾ.
ಇದುವೆ ನಮ್ಮ ವಿಶ್ವಕಲ್ಯಾಣಿ ತ್ರಿಕಾಲಜ್ಞಾನಿ
ಬಸವಣ್ಣ ತೋರಿದ ಕಾಯಕಧರ್ಮ ರಹಸ್ಯ !
ಕಾಣ, ಶ್ರೀ ಶೈಲ ಮಲ್ಲಿಕಾರ್ಜುನ.

### ಹೊಲೆಯನಾರು ? : [೨೦]

"ಹೊಲೆಯ ಊರ ಹೊರಗಿಲ್ಲ ನೋಡಾ-
ಹೊಲೆಯ ಹೊಲೆಯನೆಂದು ನುಡಿಯದಿರಿಂಭೋ !
ಒಂದು ಎಲುವು ಕಂಡರೆ ಹೊಲೆ ಎಂಬಿರಯ್ಯ.
ಹಲವು ಎಲುವು ಬಾಯೊಳಗಿರಲು ಏಕೆ ನುಡಿವಿರಯ್ಯ ?
ಕೊಟ್ಟ ಭಾಷೆಗೆ ತಪ್ಪುವನೊಬ್ಬ ಹೊಲೆಯ.
ಇಟ್ಟ ಆಣೆಯ ಬೊಟ್ಟೆ ಹೇಳುವನೊಬ್ಬ ಹೊಲೆಯ.
ಪರವಧುವಿಂಗೆ ಆಶೆ ಮಾಳ್ಪವನೊಬ್ಬ ಹೊಲೆಯ.
ಹೆರರ ಮನವ ನೋಯಿಸುವಾತನೊಬ್ಬ ಹೊಲೆಯ
ಸತಿಯನುಳಿದು ಪರಸತಿಯೊಳು ಬೆರೆವನೊಬ್ಬ ಹೊಲೆಯ.
ಮತಿಯನುಳಿದು ಪರನಿಂದೆಗೆಯ್ವಾತನೊಬ್ಬ ಹೊಲೆಯ.
ಸತ್ಯನುಡಿ ಅಸತ್ಯವೆಂದು ನುಡಿವನೊಬ್ಬ ಹೊಲೆಯ.
ನಿತ್ಯನಿಜತತ್ತ್ವ ಸುಳ್ಳೆಂದು ಸಾಧಿಸುವನೊಬ್ಬಹೊಲೆಯ.
ಭಕ್ತ - ಕಡಿಮೆ ಎಂಬಾತನೊಬ್ಬ ಹೊಲೆಯ.
ಮುಕ್ತ - ಪ್ರಪಂಚಿ ಎಂಬವನೊಬ್ಬ ಹೊಲೆಯ.
ಶರಣ ಮಹಿಮೆಕಂಡು ಆಗದವನೊಬ್ಬ ಹೊಲೆಯ.
ಪರಶಿವತತ್ತ್ವ ಹಿರಿದೆಂದು ಭಾವಿಸದವನೊಬ್ಬ ಹೊಲೆಯ.

ಇಂತು ಒಂದನಾಡ ಹೋಗಿ ಒಂಬತ್ತಾನಾಡುವ ಮಾನವ-
ಜಂತುಗಳೆನಿಪ ಧರ್ಮಲಂಡರೆಲ್ಲ ಹೊಲೆಯರು ಕಂಡಯ್ಯ !

ಶಿವಭಕ್ತಿ - ಶಿವಧ್ಯಾನ - ಶಿವಜ್ಞಾನರತನಾದ - ಕಾಯಕನಿರತನಾದ
ಹೊಲೆಯನಾದಡವನ ಶರಣನೆಂಬೆನಯ್ಯ !

ಶಿವಭಕ್ತಿ ಮಾಳ್ಪಹೊಲೆಯನೆ ಕುಲಜನೆಂಬೆನಯ್ಯ !
ಕುಡಿವ ನೀರು, ಸುಡವ ಅಗ್ನಿ, ನಡೆವ ಭೂಮಿಯೊಂದೆಯಿರಲು
ನಡುವೆ ಕುಲವೆಂಬ ಘುಸಣೆಯೆತ್ತಣದು ?
ಹೇಳಾ, ಶ್ರೀಶೈಲಮಲ್ಲಿಕಾರ್ಜುನ."

## ಧಾರ್ಮಿಕ ಸ್ವಾತಂತ್ರ್ಯ : [91]

ಸಹಸ್ರಾರು ವರುಷಗಳಿಂದಲೂ ನಮ್ಮ ಭರತಭೂಮಿ,
ವರ್ಣಾಶ್ರಮ ಧರ್ಮಗಳ ಹಾವಳಿಯಿಂದ,
ಸರ್ವರಿಗೂ ಸಮನಾದ ಧಾರ್ಮಿಕ ಸ್ವಾತಂತ್ರ್ಯಸಿಕ್ಕದೆ,
ಆತ್ಮಜ್ಞಾನದೈಶ್ವರ್ಯ ಕಳೆದು ಹೋಗಿ ಬಡವಾಗಿ ಬಳಲುತ್ತಿತ್ತು ನೋಡಾ.
ಅದು ಕಾರಣ ಪರಶಿವನ ಸ್ವರೂಪರಪ್ಪ ಶ್ರೀಬಸವಾದಿ ಪ್ರಮಥರಾಗಮನವಾಯಿತ್ತು !
ಭುವನಭಾಗ್ಯತುಂಬಿ ಬಂದಿತ್ತುನೋಡಾ ! ಬಸವಧರ್ಮಭಾನುವಿನ ಉದಯದಲ್ಲಿ,
ಈ ಜಾತಿ 'ವರ್ಣಾಶ್ರಮ'ಗಳೆಂಬ ಕಾರ್ಮೋಡಗಳಾಕತ್ತಲೆ ಕಳೆದು
ಧಾರ್ಮಿಕಸ್ವಾತಂತ್ರ್ಯವೆಂಬಾ ಬೆಳಕು ಎಲ್ಲೆಡೆಗೂ ಪಸರಿಸಿತ್ತು ನೋಡಾ !
ಈಗ ಪೃಥ್ವಿಯೊಳು ಬಸತತ್ತ್ವಗಂಗೆ ತುಂಬಿ ಪ್ರವಹಿಸುತಿರ್ದಳು !
ಕೇಳಾ, ಶ್ರೀಶೈಲಮಲ್ಲಿಕಾರ್ಜುನ"

## ಸ್ತ್ರೀಕುಲೋದ್ಧಾರ : [92.]

"ನಸ್ತ್ರೀ ಸ್ವಾತಂತ್ರ್ಯ ಮಹರ್ಷಿ, ಎಂದೊರೆದಾ
'ಮನು' ವಿನಿಂದೆ ಮಹಿಳಾ ಸ್ವಾತಂತ್ರ್ಯ ಹರಣವಾಯಿತ್ತು ನೋಡಾ.
ಮಹಿಳೆ ಮುಂದುವರಿಯುಲವಕಾಶವಿಲ್ಲವಾಯಿತ್ತು ನೋಡಾ.
ಸ್ತ್ರೀ ಜ್ಞಾನ ಪಡೆದಾತ್ಮ ವಿಕಸನಕ್ಕನುವಿಲ್ಲವಾಯಿತ್ತು ನೋಡಾ.
ಭಾರತದೊಳಗಣಿತ ಮಹಿಳೆಯರಾಗ,
ಅಜ್ಞಾನ ಪಂಜರದೊಳು ಶಿಲುಕಿ ಬಳಲುತಿರ್ದರು ನೋಡಾ.
ಇಂತಿರ್ಪ ಸಮಯದೊಳ್ ಲೋಕ ಧರ್ಮಪಾವನ ಮೂರ್ತಿ ಬಸವಣ್ಣ

# ವಿಮರ್ಶೆಯ ವ್ಯಾಪ್ತಿ

## (ಕಿರು ವಿವೇಚನೆ)

—ಎಸ್. ಎಸ್. ಗದಗಕರ, ಶುಕ್ರವಾರ ಪೇಟೆ, ನವಲೂರ ಅಗಸಿ, ಧಾರವಾಡ.

Crtics are like horse fliss which prevent the hors
from ploughiug

—Tehekov

ಎಂಬಂತಹ ಉದ್ಗಾರಗಳನ್ನವಲೋಕಿಸುವಾಗ, ಕಲಾವಿದನ ಕಾರ್ಯರಂಗಕ್ಕೆ ವಿಮರ್ಶಕನಿಂದ ಕಾಲ್ತೊಡಕೆ ಎಂದು ಸರ್ವಸಾಮಾನ್ಯವಾಗಿ ಅವಗತವಾಗುವದುಂಟು. ಆದರೆ ಸ್ವಲ್ಪ ಕೂಲಂಕಷವಾಗಿ ನಿರೀಕ್ಷಿಸಿದರೆ, ಸೃಜವಿಮರ್ಶಕ ಕಲಾಕೃತಿಯ ರಸಾಸ್ವಾದನಗೆ ಅಡೆ ತಡೆಯುಂಟುಮಾಡುವಲ್ಲಿಯೇ ಸಂತೃಪ್ತಿ ಎಂಬ ಕಲ್ಪನೆ ವಿದೂರ ವಾಗುವದುಂಟು. ಶ್ರೀ. ಅ ನ. ಕೃಷ್ಣರಾಯರು ಹೇಳಿದಂತೆ, ಅವದ್ವೈವಾಗಾರ ಪೂಜಾರಿ. ಒಳಗಿನ ಮೂರ್ತಿಯನ್ನು ಕಡೆದವ ಕಲಾವಿದ. ಮೂರ್ತಿಯ ಸೌಂದಯ ವನ್ನು ತಾತ್ವಿಕ ಹಿನ್ನೆಲೆಯಲ್ಲಿ ಕಲಾತ್ಮಕವಾಗಿ ವಿವರಿಸುವವ ವಿಮರ್ಶಕ. ಆ ವಿಮರ್ಶೆ ಯಲ್ಲಿ ವ್ಯಕ್ತಿಗತ ನಿರೂಪಣೆ (revelation of personality) ಇದ್ದರೂ ವಿವೇಕಿ ವಿಮರ್ಶಕ ಮೂಲಭೂತ ತತ್ವಗಳನ್ನು ಕರತಲಾಮಲಕವಾಗಿಸಿ ಕೊಂಡಿರು ವಿಮರ್ಶಕನ ಸ್ಥಾನಮಾನದ ಒಗೆಗೆ ನಡೆದ ಊಹಾಪೋಹ ರೋಮಾಂಚಕ ವಾಗಿದೆ. ಒಬ್ಬ ವಿಮರ್ಶಕನ ತತ್ವ ಇನ್ನೊಬ್ಬನಿಂದ ವಿಭಿನ್ನವಾಗಿವೆ ಎನಿಸುವವ - ಹೂವುಗಳ ವರ್ಣ, ಆಕಾರ ಸುವಾಸನೆಯಂತೆ, ಏನೇ ಆಗಲಿ ವಿಮರ್ಶನ ಕಲೆಯ ತತ್ವಗಳನ್ನರಗಿಸಿಕೊಳ್ಳಲು ಅನೇಕ ವಿಮರ್ಶಕ ಅಭಿಪ್ರಾಯಗಳನ್ನು ಉದಾಹರಿಸಲು ಒರಗೆ ಹಚ್ಚುವುದು ಅತ್ಯಾವಶ್ಯಕವಾಗಿದೆ ಇಂದಿನ ವಿಮರ್ಶ ರೀತಿಯ ಆಗು ಹೋಗುಗಳ ಬಗೆಗೆ ಪರ್ಯಾಲೋಚಿಸಲು ನಾವು ವಿದ್ಯುಕ್ತರಾದಲ್ಲಿ ಅದರ ಇತಿಹಾಸ ಅವಲೋಕನವೂ ಯಾವ ಮಾನದಲ್ಲಿಯೂ ನಿಷ್ಪ್ರಯೋಜಕವಲ್ಲ

ತೀರ ಇತ್ತೀಚಿನ ಗಣ್ಯ ವಿದ್ವಾಂಸಕವಿಗಳಾದ ಜಿ. ಎಸ್. ಎಲಿಯಟ್ಬರು- "A critic should discipline personal prejudices and cranl ಎಂದು ತಮ್ಮ Function of criticism" ಎಂಬ ಹೊತ್ತಿಗೆಯಲ್ಲಿ ವಿವೇಚಿ ಸಿರುವುದು ಮನನೀಯ ಅಂಶ. ಆ ದೃಷ್ಟಿಯಿಂದ ಯೋಚಿಸಿದರೆ, ವಿಮರ್ಶಕನ ಹೊಣೆಗಾರಿಕೆ ತೀರ ಹಿರಿದು ಎಂದು ಥಟ್ಟನೆ ಮನವರಿಕೆ ಆಗುವದು ಅಚ್ಚುಕಟ್ಟು ತನ, ಸಂಯಮ ಅವನ ಕಾರ್ಯಗಾರದ ಜೀವಾಳ ಎನ್ನುವುದು ಸಮಂಜಸ ಮಾತು. ಪೂರ್ವಗ್ರಹ ದೂಷಣೆಗೂ (Prejudice) ಅವನಿಗೂ ಎಣ್ಣೆ ಸೀಗೆ ಸಂಬಂಧ ಎನ್ನುವುದು ಯುಕ್ತಅಂಶವೇ ಸೈ.

ವಿಮರ್ಶೆ ಎಂದರೇನೆಂಬುದರ ಬಗೆಗೆ ಮ್ಯಾಥ್ಯೂ ಆರ್ನಾಲ್ಡ್ ವಿವರಿಸಿದುದು ಪಕ್ಕಾ ಬೋಧಪ್ರದವಾಗಿದೆ. ಮೊಟ್ಟ ಮೊದಲು ವಿಮರ್ಶಕನೂ ಕಲಾವಿದನಂತೆ ಸ್ವಾವೆ ಒಬ್ಬ ವಿದ್ಯಾರ್ಥಿಯೇ, ಅವನಿಗೂ ಹೆಜ್ಜೆ ಹೆಜ್ಜೆಗೆ ಕಲಿಸುವದಕ್ಕಿಂತ ಲಿಯುವದೆ ಹೆಚ್ಚಿಗಿರುವದು. 'ಶ್ರದ್ಧಾವಾನ್ ಲಭತೆಜ್ಞಾನಂ' ಎಂಬ ಗೀತೆಯ ಹದುಕ್ತಿಯನ್ನು ವಿಮರ್ಶಕ ಕಾಲುಕಸವಾಗಿಸಲಾರ. ಸ್ವಾರ್ಥ ಸಾಧಿಸುವದು ಜ ವಿಮರ್ಶಕನಿಗೆ ಎಂದೂ ಸಲ್ಲದೆಂಬ ಆರ್ನಾಲ್ಡ್‌ನ ಉದ್ಗಾರ ಬೆಲೆಬಾಳು ಂತಹದು. ವಿಮರ್ಶಕನು ಕಲಾಕೃತಿಯ ಬೆಲೆಯರಿಯಲು ಮನಮುಟ್ಟಿ ಯತ್ನಿ ವಾಗ ಅವ ಅಜ್ಞರನ್ನು ಎಂದೂ ಕಡೆಗಣಿಸಲಾರ. ಕಲೆಯ ಬೆಲೆಯ ಸಾಮಾನ್ಯ ಪ್ರಚಾರವೇ ಅವನ ಜೀವಿತದ ಪವಿತ್ರ ಧ್ಯೇಯವಲ್ಲವೆ? ಈ ಸಿದ್ಧಿಗಾಗಿ ಅವನ ಸಾಧನಗಳೂ ಅಪರಿಮಿತ, ತಪಸ್ಸೂ ಹೆಚ್ಚಿನದು. ಯಾಕೆಂದರೆ ಕಲೋಪಾಸಕನ ಅಂತರಂಗ ಅರಿಯಲು ವಿಮರ್ಶಕ ಮೊದಲು ಅವನ ಬೌದ್ಧಿಕ ಆರ್ಥಿಕ ಮಟ್ಟ ಮುಟ್ಟಬೇಕು. ಅನಂತರ ತಾನು ಅನುಭವಿಸಿದ ಕಲೆಯ ನೆಲೆಯನ್ನು ಮೋಹಕವಾಗಿ ರೂಪಿಸುವುದು ಅವನ ಹೊಣೆಗಾರಿಕೆ, ನಿರೂಪಣೆಯಲ್ಲಿಯೂ ಅವನು ಜೊಂಬಂವನಂತೆ ತೂಕ ತಪ್ಪಬಾರದು, ತಪ್ಪಿದರೆ ಉಪರಾತ್ಮರಕೊಳ್ಳದ ಅಡಿಗೆ ಊಟ ಖಂಡಿತ! ಸತ್ಯಂ ಶಿವಂ ಸುಂದರಂ ಎಂಬವು ವಿಮರ್ಶಕನ ತಾರಕವಾದ ಸೂತ್ರ ತ್ರಯ, ಬೀಭತ್ಸವನ್ನೇ ಕಂಡೆನೆಂದು ಕೇಳುವದಾದರೆ ವಿಮರ್ಶಕ ಏಕೆ ಬೇಕು? ಸತ್ಯಾನ್ವೇಷಣೆಯೊಡನೆ ಶಿವ ಇಲ್ಲವೆ ಸೌಂದರ್ಯ ಲೋಕಕಲ್ಯಾಣ ಅವ ಬಿಟ್ಟು ಕೊಡುವಂತಿಲ್ಲ. ಕಲಾವಿದನದು ಇಂತು ಒಂದು ಸರಸ ಸುಂದರ ವಿಶ್ವವಾದರೆ ವಿಮರ್ಶಕನದೂ ಒಂದು ಪ್ರತಿಸೃಷ್ಟಿ [ವಿಶ್ವಾಮಿತ್ರನಂತಹದೆ?], ಆದರೆ ಇಲ್ಲಿ ಶಾಸ್ತ್ರದ ಪ್ರಮಾಣಗಳಿಗೆ ವಿಶೇಷ ಮನ್ನಣೆಯುಂಟು. ವಿಮರ್ಶಕನ ತೂಕದ ಕಲ್ಲುಗಳೂ ಖೊಟ್ಟಿ ಆದರೆ ನಡೆದೀತೆ? ತೂಕದೊಡನೆ ವಿಮರ್ಶಕ ದೇಶ-ಕಾಲ-ಪರಿಸ್ಥಿತಿಯನ್ನು ಅಲ್ಲಗಳೆಯಲಾರ. ತಂದೆ ಮುತ್ತಜ್ಜರ ಕಾಲದ ತಾತ್ವಿಕ ಪ್ರಣಾಲಿಗಳಿಗೂ ಇಂದೂ ಅಪ್ಪೇಮನ್ನಣೆ ಒದಗಲಿ ಎಂದು ಹಟ ಹಿಡಿದರೆ ತಾತಸ್ಯ ಕೂಪಮಿತಿ ಬ್ರುವಾಣಾಃ ಕಾರಂ ಜಲಂ ಪುರುಷಾಃ ಎಂಬಂತೆ' ಎಂಬಂತಹ ಅನಿಷ್ಟಕಾರಕ ಗತಿ ವಿಮರ್ಶಕನ ಪಾಲಿಗೆ ಉಂಟಾದೀತು! ಆ ದೃಷ್ಟಿಯಿಂದ—

"Criticism is a disinterested endeavour to learn and propagate the best that is known and thought in the world, and thus establish a current of fresh and true ideas" ಎಂಬ ಆರ್ನಾಲ್ಡ್‌ನ ಅಭಿಪ್ರಾಯ ಮಾನ್ಯ ಎನಿಸುವಲ್ಲಿ ಸಂದೇಹದ ಸ್ತೋಕಾಂಶವಿಲ್ಲ.

ಬೇರೊಂದು ದೃಷ್ಟಿಯಿಂದ ಲಕ್ಷಿಸುವಾಗ ವಿಮರ್ಶಕನ ಸ್ಥಾನಮಾನವು
ನ್‌ರ ಕಣ್ಣಲ್ಲಿ ವಿಶಿಷ್ಟವಾಗಿ ಪರಿಣಮಿಸಿತು. ಈ ಮೊದಲೆ ನಿವೇದಿಸಿದಂತೆ,
ರ್ಶಕನ ಮೇಲೆ ಕಲಾವಿದನ ಪ್ರಭಾವ ಬಿದ್ದಿದ್ದರೂ ಅವ ರಸಿಕ ಜನತೆಯನ್ನು
ಗಿರಿಸಲಾದ. ಅವರ ಅಭಿಪ್ರಾಯಗಳನ್ನು ತಕ್ಕಡಿಗೇರಿಸಲಾರ. ಜನತೆಯ ಆಹ
ವನ್ನು ಎದುರಿಸಿ ಸಮಂಜಸ ಉತ್ತರ ಸಲ್ಲಿಸುವುದು ಅವನ ಹಿರಿಹೊಣೆ. ಒಮ್ಮೊ
ಅಜ್ಞ ಜನಕ್ಕೆ ಅವ ಜ್ಞಾನದ ದೃಷ್ಟಿಯನ್ನು ಒದಗಿಸುವ. ಆಗೂ ವಿಮರ್ಶಕ ಸ
ರುವಿನಂತೆ! ಜನಸಾಮಾನ್ಯರಲ್ಲಿ ಪ್ರರೂಢವಾದ ತಪ್ಪುಕಲ್ಪನೆಗಳನ್ನು ತನ್ನ ಪ್ರ
ಯಿಂದ ಪ್ರಗಲ್ಭ ವಿಚಾರಗಳಿಂದ ಹೊಡೆದೋಡಿಸುವುದು ತನ್ನ ಆದ್ಯ ಕರ್ತವ್ಯವೆ
ಆತ ಅರಿಯುವ. ಹಾಗೆ ಬಿಂಬಿಸುವ. ಇಷ್ಟರಿಂದಲೆ ವಿಮರ್ಶಕ ವಂದಿ ಮಾ
ಅನ್ನಲಾಗದು. ಆರೋಗ್ಯದ ಬಗೆಗೆ ವ್ಯಾಖ್ಯಾನ ಸಲ್ಲಿಸುವುದಷ್ಟೇ ಅವನ ಕಾ
ವಾಗದೆ, ಒಂದೊಂದು ಪ್ರಸಂಗದಲ್ಲಿ ಜಾಗ್ರತೀ (Provocation) ಉಂಟುಮ
ಡುವುದೂ ಅವನ ಸ್ಫುಟ ವಿಚಾರ. ಏನಿದ್ದರೂ ವಿಮರ್ಶೆಗೆ ಗೊತ್ತು ಗುರಿಯು ಜೊ
ಕಲಾದರ್ಶನದ ಹೊಣೆಗಾರಿಕೆ ಇರುವುದು .ಗಾಳಿಯಲ್ಲಿ ಶಾಸ್ತ್ರೀಯ ತತ್ವ ತೂರಿದ
ಆವನ ಕಾರ್ಯ ಸುಗುಮವೆನ್ನಲಾಗದು. ಅವ್ಯವಹಾರ್ಯ ಪ್ರಮಾಣಗಳಿ
ಕಲೆಯ ಸಮ್ಯಗ್ ದರ್ಶನವಾಗುವದೆಂತು ? ಕಾಲಕಾಲಕ್ಕೆ ಬದಲಾಗುವ ಜನತೆ
ಅಭಿರುಚಿಗಳ ಮೇಲೆ 'ಕ್ಷ' ಕಿರಣ ಹರಡಿ ಮನಃಸ್ವಾಸ್ಥ್ಯ ನೆಲೆಗೊಳಿಸುವುದು ವಿ
ರ್ಶಕನ ಗುರಿಗಳಲ್ಲೊಂದು. '' Literature is the comprehensi
essence of the intellectual life of a nation " ಎಂದು ಉದ್ಗಾ
ತೆಗೆದ ಫ್ರೆಡ್ರಿಕ್ ಸ್ಲೀಗಲ್‌ನ ಅಭಿಪ್ರಾಯ ಸಾಹಿತ್ಯ ವಿಮರ್ಶೆಗೂ ನೇರವಾಗಿ ಅ
ಯಿಸುವುದೆಂದು ಬೇರೆ ಹೇಳಬೇಕಾಗಿಲ್ಲ. ವಿಮರ್ಶೆಯಾದರೂ ಮಾನವಕೋಟಿ
ಸಾಹಿತ್ಯಕ ಜೀವನದ ಸತ್ಯ, ಕಾವ್ಯಕಲೆಗಳ ಸ್ಥಾನಗಳ ಹಿನ್ನೆಲೆಯಲ್ಲಿ ಮಾನವ ಜೀವ
ಅತ್ಯುನ್ನತ ಎನಿಸಿದೆ. ಸತ್ಯವನ್ನರಸುವುದೇ ಇವುಗಳ ಗುರಿ. ಪ್ಲೆಟೊ ಹೇಳುವಂ
ಕಾವ್ಯೋಪಾಸನೆ ಸ್ವರ್ಗೀಯ ಹುಚ್ಚೇ. ಲಾಂಜಿನಸ್‌ನ ಕಣ್ಣಲ್ಲಿ ಕಾವ್ಯ ಜಾಜ್ವಲ್ಯಮಾ
ಬೆಳಕಾಗಿ (Illumination) ಪರಿಣಮಿಸಿತು.

ವಿಮರ್ಶಕನಾರು ? ಅವನ ರಂಗದ ವ್ಯಾಪ್ತಿ ಏನು ? ಎಂಬುದರ ಬಗೆಗೆ ಎಂ
ನಿಂದಲೂ ಊಹಾಪೋಹ ನಡೆದಿದೆ. ಶಿಲ್ಪಶಾಸ್ತ್ರದ ವಿಮರ್ಶಕ ಶಿಲ್ಪಿ! ತೋಟಗಾ
ರಿಕೆಯ ವಿಮರ್ಶಕ ತೋಟಿಗ. ಕಾವ್ಯದ ವಿಮರ್ಶಕ ಕವಿಯೆ? ಎಂದು ಹೇಳುವುದು ಸಹ

ಸಾಹಿತ್ಯದ ವಿಷಯವನ್ನೇ ಎತ್ತಿಕೊಂಡಾಗ ಅಲ್ಲಿ ಅನೇಕ ರಂಗಗಳಿದ್ದುದು ಕಂ
ಬರುವುದು. ಲೇಖಕ, ಓದುಗ, ವಿಮರ್ಶಕ ಈ ಮೂವರ ಕಾರ್ಯಕ್ಷೇತ್ರ ವಿಭಿನ್ನ
ವಾಗಿದ್ದರೂ ಮೂವರಿಗೂ ತಳುಕು ಇದೆ, ಒಂದೇ ವಿಷಯದ ಬಗೆಗೆ ಮೂವರೂ

ನುಭವ ಅಭಿವ್ಯಕ್ತಗೊಳಿಸುವರು. ತಮ್ಮ ಅನುಭವಗಳನ್ನು ಕ್ರೋಢೀಕರಿಸಿ ಸ್ವಾದ ಪಡೆಯುವುದು ಪೂರ್ವರ ಸೊತ್ತೇ. ಆದರೆ ಅವರ ರೀತಿನೀತಿಗಳನ್ನು ಸೃಷ್ಟಿಸುವುದು ನಿಜಕ್ಕೂ ರಂಜನೀಯ, ರೋಮಾಂಚಕ, ಬೋಧಪ್ರದ. ಲೇಖಕನು ...ದು ಮೋಹಕ ಸನ್ನಿವೇಶವನ್ನು ಬಣ್ಣಿಸುವನು. ಅವನ ರೀತಿ ಅವನದೇ. ಆದರೆ ...ವನ್ನೇ ಪ್ರೇಯಾಗಿ ಸೃಷ್ಟಿಸಿ ಕಲೆಯ ದೃಷ್ಟಿಯಿಂದ ತಾತ್ವಿಕವಾಗಿ ಮೂಲನಿರ್ಣಯ ...ಸುರುವುದು ವಿಮರ್ಶಕನ ಹೊಣೆ. ವಿಮರ್ಶಕನಲ್ಲಿ ಸೂಕ್ಷ್ಮತೆ, ಸೌಕುಮಾರ್ಯ ...ಸ್ತ್ರೀಯತೆಯ ಬಲ ಹೆಚ್ಚಿದಷ್ಟೂ ಅವನ ಮಾತಿಗೆ ಪ್ರಾಮಾಣ್ಯ ಹೆಚ್ಚುವುದು. ...ದ್ದರೂ ವಿಮರ್ಶಕನೂ ಒಬ್ಬ ಓದುಗನು. ಅದಕ್ಕೂ ಹೆಚ್ಚಾಗಿ ಅವನು ರಸಿಕ, ...ರ್ಣಾಯಕ ಬುದ್ಧಿ ಅವನ ಜೀವಾಳ. ಚಿತ್ರಪಟಗಳ "Censor Board" ದ ...ರ್ತವ್ಯದಂತೆ ಇವನೂ ತನ್ನ ಪಾಲಿನ ನಿರ್ಣಯದ ಹೊಣೆಯನ್ನು ತೀರಿಸುವನು. ...ಲೇಖಕನಾದವನನ್ನು ಒಬ್ಬ ಸಾಮಾನ್ಯ ಎಂಜಿನಿಯರ್‌ನಿಗೆ ಹೋಲಿಸಬಹುದು. ...ವನು ಮಾಡಿದ ಕೆಲಸದ ನೆಲೆಬೆಲೆ ನಿರ್ಣಯಿಸುವವ ಬೇರೊಬ್ಬ ತಜ್ಞ ಅಧಿಕಾರಿ. ...ಮರ್ಶಕನ ಕಾರ್ಯವೂ ಈ ಅಧಿಕಾರಿಯಂತಹದೆ! ವಿಮರ್ಶಕನಲ್ಲಿ ಹೀಗೆ ಸಮಗ್ರತೆಯ ...ಲ್ಪನೆಯುಳ್ಳದೆ ಸ್ವಾನುಭವ ಕಲಾಪ್ರಜ್ಞೆ ಧಾರಾಳವಾಗಿ ನೆಲಸಿರುವುದು ಅತ್ಯಗತ್ಯ. ...ಸಾಮಾಜಿಕ ಪ್ರಜ್ಞೆಯೂ ಅವನ ಬೆಂಬಲಕ್ಕಿರಬೇಕು. ಕಲೋಪಾಸಕನೊಬ್ಬ ...ರ್ಮಿಸಿದ ಕಲಾಕೃತಿ ಯಾವ ಮಟ್ಟದಲ್ಲಿ ಹರುಷ ಹುಟ್ಟಿಸುವುದೆಂದು ಹೇಳುವುದು ...ಮರ್ಶಕನ ಕರ್ತವ್ಯ. ಕಾವ್ಯದ ದೃಷ್ಟಿಯಿಂದ ನಾವು ವಿಮರ್ಶಕನ ಸ್ಥಾನವನ್ನು ...ವರಿಸಬೇಕಾದರೆ " To judge of poets is only the faculty of poets " ಎಂದು ಹೇಳಬೇಕಾದೀತು.

ಕಲೆಯ ಒಂದು ರೂಪವಾದ ಕಾವ್ಯದ ವಿಮರ್ಶೆಗೆ ತೊಡಗಿದಾಗ ನೀತಿಯ (Morality) ಪ್ರಶ್ನೆ ಏಳುವದು: ಇದರಲ್ಲಿ ಭಿನ್ನಾಭಿಪ್ರಾಯಕ್ಕೆ ಎಡೆ ಇದೆ. ಕಾವ್ಯದ ಸ್ವರೂಪವನ್ನೇ ನಾವು ಮೊಟ್ಟ ಮೊದಲು ನಿರೀಕ್ಷಿಸಿದರೆ ಇಂಗ್ಲೆಂಡದ ಪ್ಯೂರಿಟನ್‌ರು ಅವರ ಬಗೆಗೆ ಸದಭಿಪ್ರಾಯ ತಳೆದಿರಲಿಲ್ಲ. ರಸ್ಕಿನನು ಕಾವ್ಯದ ಬಗೆಗೆ ಆದರ ಉಳ್ಳವನಾಗಿದ್ದ. All art that was art was of divine origin; it was the witness of the glory of gods ಎಂಬ ಕಲ್ಪನೆ ವಿಕ್ಟೋರಿಯನ್ ಕವಿಗಳಿಗೆ ಇದ್ದಿತು. ರಸ್ಕಿನ್‌ನಿಗಾಗಲಿ ಪ್ಲೆಟೋವಿಗಾಗಲಿ ನೀತಿಯು ಕಾವ್ಯದಿಂದ ವರ್ಜಿತವಾಗಬೇಕೆ, ಬೇಡವೇ ಎಂಬ ಪ್ರಶ್ನೆ ಇತ್ತು.

ವಿಮರ್ಶಕನಿಗೆ ಸಾಹಿತ್ಯದ ಸ್ವರೂಪದ ಪ್ರಜ್ಞೆ ಇರಬೇಕಾದುದು ಅವಶ್ಯ. ಡ್ರೈಡನ್‌ನು ಸಾಹಿತ್ಯಕ್ಕೆ ಅಪರಿಮಿತ ಅಂತಃ ಶಕ್ತಿಯುಂಟೆಂದು ನಿರೂಪಿಸಿದ. ಜನಾಂಗದ ಪ್ರಗತಿಗೆ ಅನುಗುಣವಾಗಿ ಅದರ ಬೆಳವಣಿಗೆ ಎಂದು ಸಾಧಿಸಿದ. Art is daynamic and not a Static force ಎಂಬದು ಅವನ ವಾದ.

ಇದೇ ಸನ್ನಿವೇಶದಲ್ಲಿ ಜನತೆಗೂ ಕಾವ್ಯಕ್ಕೂ ಏನು ಸಂಬಂಧ ಎಂಬ ಪ್ರ ತಲೆದೋರುವುದು. (ಡ್ರೈಡನ್‌ನ ಕಾಲಕ್ಕೆ ಕಲೆಗಾಗಿ ಕಲೆ ಎಂಬವಾದ ಉದ್ಭವಿಸಿರಲಿ ಆ ಸಮಸ್ಯೆಯೇ ಮುಂದೆ ಕಾಲಾಂತರದಲ್ಲಿ ಕಾವ್ಯದ ಉದ್ದೇಶ ಜ್ಞಾನರಂಜನೆ ಎ ವಾದಕ್ಕೆ ಎಡೆ ಕಲ್ಪಿಸಿತು. ಅದಕ್ಕೆ ಲಾಂಜಿನಸ್ ಭಾವನಿರ್ಭರತೆಯನ್ನೊಂದು ಹೊಂ ಅಂತೂ ' My chief endeavours are to delight the age i which I live' ಎನ್ನುವ ಮೆಟ್ಟಗೆ ಕಾವ್ಯದ ಸ್ವರೂಪ ಮುಟ್ಟಿತು.

ಇಷ್ಟಕ್ಕೆ ಈ ಚರ್ಚೆ ಕೊನೆಗೊಳ್ಳದೆ ಕಲೆಯ ಸ್ವರೂಪದ ವಿವೇಚನೆ ಮುಂದು ವರಿಯಿತು. 'Art does not aim at mere copying' but a making, a beautiful resemblance of the whole ಎಂಬ ಅಭಿಪ್ರಾ ಉದ್ಭೂತವಾದಾಗ ಕಲೆ ಕೇವಲ ಅನುಸರಣೆ (Photographic represen tation) ಆಗಲಿಲ್ಲ. ಅಲ್ಲಿ ಸೃಜನಾತ್ಮಕಶಕ್ತಿ (Creativity) ಸೌಂದರ್ಯ ಮಿಮಾಂ ಕೂಡ ತಲೆಎತ್ತಿದವು.

ಸಾಮಾನ್ಯವಾಗಿ ಕವಿಯನ್ನು ಗಡಿಯಾರ ನಿರ್ಮಾಪಕ ಇಲ್ಲವೆ ಕಮ್ಮಾರನಿ ಹೋಲಿಸುವುದುಂಟು. ಅವನ ನಿರ್ಮಾಪಕ ಕೌಶಲಕ್ಕೆ ಪೋಷಕವಾದುವು ಕಬ್ಬಿಣ, ತನ್ನ ಪ್ರತಿಭೆಯಿಂದಲೆ ಕವಿ ವಿಡಂಬಿಸುವ, ಆಳಿಸುವ, ನಗಿಸುವ, ಜೀವನದ ಸರ್ವ ಸಾಮಾನ್ಯ ಘಟನೆಗಳೇ ಕವಿಯ ಸ್ಫೂರ್ತಿಗೆ, ರಸಭಾವಗಳಿಗೆ ಕಚ್ಚಾ ಸರಕು (raw products).

ಕಾವ್ಯದ ವಿಷಯವನ್ನೇ ಮುಂದುವರೆಸಿದರೆ ಶೆಲ್ಲಿಯ ವ್ಯಾಖ್ಯೆ ನಮ್ಮ ಕಣ್ಕಟ್ಟು ವದು. Poetry is the record of the happiest and the best moments of the happiest and the best minds ಎಂಬ ಅವನ ಉದ್ಗಾರ ಅರ್ಧ ಸತ್ಯ ಎನಿಸುವದು. ಅದೇ ಕವಿಯ ಅಲೌಕಿಕ ವಿಲಾಪ ಗೀತೆಗಳಾದ Adonais, Alaster' ಇವುಗಳನ್ನು ಕಾವ್ಯರಂಗದಿಂದ ತಳ್ಳಬೇಕೆ? Our sweetest songs are those tels of saddest thoughts ಎಂಬ ಅವನ ಉಕ್ತಿ ಅರ್ಥಹೀನವೊ ಹೇಗೆ? ಸತ್ಕೃತಿಯನ್ನೆ (Execllent action) ಕಾವ್ಯದ ಗುರಿಯನ್ನಾಗಿ ಇಟ್ಟುಕೊಂಡರೆ ಸಾಹಿತ್ಯದಲ್ಲಿ ಅಮೃತತ್ವ ಪಡೆದ ಇಬ್ಸೆನ್, ವಾಲ್ಟ್ ವ್ಹಿಟ್‌ಮನ್, ಹಾರ್ಡಿ ಚೆಕ್ಸೊವ್ ಫ್ಲೋಬಾ ಇವರ ಗತಿಏನು? ಇಂತು ಕಾವ್ಯದ ಪರಿಮಿತಿ ವಿಶ್ವದಂತೆ ವಿಸ್ತೃತ, ಅಪಾರ. ಹಾಗೆಯೇ ವಿಮರ್ಶಕನಗತಿ ಕೂಡ. ಕೊನೆಗೆ ನೀತಿಗೂ ಕಲೆಗೂ ವಿಮರ್ಶೆಗೂ ನಿಕಟ ಸಂಬಂಧವಿದೆಯೆಂದು ಉದಾಹರಿಸಲು ಚೆಸ್ಟರ್ಟನ್‌ರ But it is a bad principle if it means that the tree could grow just as well with its roots in the air "ಎಂಬ ನುಡಿಯನ್ನು ನೆನಪಿಸಿಕೊಳ್ಳಬೇಕು. ಇದೀಗ ಕಲೆ,ವಿಮರ್ಶೆ, ನೀತಿಯ ವ್ಯಾಪ್ತಿ !

# ಕ್ಷೇತ್ರ ವಾರ್ತೆ

—ಹೆಚ್. ಬಿ. ಗಂಗಾಧರಯ್ಯ

ಶ್ರೀಮಠದ ಸಂಯುಕ್ತ ವಿದ್ಯಾರ್ಥಿ ಸಂಘದ ಉದ್ಘಾಟನೆಯು ಪರಮ ಪೂಜ್ಯ ಶ್ರೀ ಶ್ರೀಗಳವರ ಸಾನ್ನಿಧ್ಯದಲ್ಲಿ [28-7-92] ನಡೆಯಿತು. ಸಾರ್ವಜನಿಕ ಶಿಕ್ಷಣ ಇಲಾಖೆ, ತುಮಕೂರು ಜಿಲ್ಲೆ ಉಪನಿರ್ದೇಶಕರಾದ ಶ್ರೀ ಪಿ. ಸುಬ್ಬರಾವ್ ಉದ್ಘಾಟನೆ ನೆರವೇರಿಸಿ ಮಾತನಾಡಿ ಶಿಕ್ಷಣ ಉದ್ದೇಶ ಸಮಾಜದ ಆಶೋತ್ತರಗಳನ್ನು ಪೂರೈಸಬೇಕು. ಈಗಿನ ಪರಿಸ್ಥಿತಿ ಹೀನಾಯವಾಗಿದೆ, ಇಂದು ಸನಾತನ ಧರ್ಮವನ್ನು ಎತ್ತಿಹಿಡಿಯ ಬೇಕಾಗಿದೆ. ಶ್ರೀಮಠದ ಪವಿತ್ರ ಸನ್ನಿವೇಶದಲ್ಲಿ ವಿದ್ಯಾರ್ಥಿಗಳು ಧರ್ಮಪ್ರವರ್ತಕರಾಗಿ ಸಮಾಜದಲ್ಲಿ ಬಾಳಿಬದುಕಬೇಕಾಗಿದೆ. ಯುವಜನತೆ ಈಗ ಪ್ರಾಪಂಚಿಕ ವಿಷಯಗಳಿಗೆ ವಿಶೇಷ ಆಸಕ್ತಿ ಹೊಂದಿದೆ. ಕೆಟ್ಟಅಭ್ಯಾಸಗಳನ್ನು ಬಿಟ್ಟು ಯೋಗ್ಯ ಮಾರ್ಗದಲ್ಲಿ ನಡೆಯಲು ಶ್ರೀ ಶ್ರೀಗಳವರ ಜೀವನದರ್ಶನ ಇಲ್ಲಿ ಪ್ರಭಾವಬೀರಿದೆ ಎಂದು ಹೇಳಿದರು.

ಮುಖ್ಯ ಅತಿಥಿಗಳಾಗಿ ಸಾ.ಶಿ.ಇ. ಹಿರಿಯ ಸಹಾಯಕ ನಿರ್ದೇಶಕರಾದ ಶ್ರೀ ಎಸ್ ಎನ್. ರಂಗೇಗೌಡರು ಮಾತನಾಡಿ ಶ್ರೀಮಠದಲ್ಲಿ ನಡೆಯುತ್ತಿರುವ ಎಲ್ಲಾ ಘಟನೆ ಮತ್ತು ಚಟುವಟಿಕೆಗಳು ಒಳ್ಳೆಯದನ್ನೇ ಮಾಡಿವೆ. [Every Thing happans for good] ಇವೆಲ್ಲವೂ ಸತ್ಯ-ಶುದ್ಧ ಹೋರಾಟಕ್ಕಾಗಿ ನಡೆದವು ಎಂದು ಸ್ಮರಿಸಿದರು. ಪರಮಾತ್ಮನ ಇಚ್ಛೆಗೆ ಎಲ್ಲರೂ ಶರಣಾರಾಗಬೇಕೆಂಬುದನ್ನು ಶ್ರೀ ಸಿದ್ಧಗಂಗೆ ಯಿಂದ ಮನಗಾಣಬೇಕು. ಇದನ್ನು ಒಂದು ಕಥೆ ನಿರೂಪಿಸುತ್ತದೆ ರಾಜ, ಮಂತ್ರಿ, ಸೈನಿಕರೊಂದಿಗೆ ಬೇಟೆಗೆಹೋದ, ಕಾಡಿನಲ್ಲಿ ದಾರಿತಪ್ಪಿ ರಾಜ, ಮಂತ್ರಿ ಮತ್ತು ಸೈನಿಕರು ಬೇರೆ ಬೇರೆಯಾದರು. ರಾಜ ಗಾಬರಿಯಿಂದ ಮಂತ್ರಿಯನ್ನು ಕೇಳಿದ ಮುಂದೇನು ಮಾಡುವುದು? ಮಂತ್ರಿ ಹೇಳಿದ ಎಲ್ಲವೂ ಆಗುವುದು ಒಳ್ಳೆಯದಕ್ಕೆ, ಮರುಮಾತಾಡದೆ ಮುಂದೆಹೊರಟರು. ಹಸಿವಾಯಿತು, ಹಣ್ಣು ಕಿತ್ತು ಕತ್ತರಿಸುವಾಗ ರಾಜನ ಕೈಬೆರಳಿಗೆ ಗಾಯವಾಯಿತು, ಮತ್ತೆ ರಾಜ ಮಂತ್ರಿ ಯನ್ನು ಪ್ರಶ್ನೆ ಮಾಡಿದ ನೋಡಿ ಏಕೆ ಈರೀತಿಯಾಯಿತು. ಪುನಃ ಮಂತ್ರಿ ಹೇಳಿದ ಅದೇ ಮಾತು ಎಲ್ಲಾ ಆಗುವುದು ಒಳ್ಳೆಯದಕ್ಕೆ, ಮುಂದೆಹೊರಟರು. ಒಂದ ಊರಿನಲ್ಲಿ ಕ್ಷಾಮತಲೆದೋರಿ ದೇವಿಗೆ ಒಬ್ಬ ರಾಜನನ್ನು ಬಲಿಕೊಡಬೇಕೆಂದು ಪ್ರಯತ್ನ ನಡೆ ಯುತ್ತಿತ್ತು. ಈ ಸಂದರ್ಭಕ್ಕೆ ಇವರು ಸಿಕ್ಕಿದರು, ಸಂತೋಷದಿಂದ ಹಿಡಿದು ತಂದರು. ಆಗ ರಾಜ ಮಂತ್ರಿಯನ್ನು ಪ್ರಶ್ನಿಸಿದ ಏನಿದೆಲ್ಲಾ? ಅದೇಮಾತು ಎಲ್ಲಾನಡೆಯುವುದು ಒಳ್ಳೆಯದೆಂದೇ, ರಾಜನಿಗೆ ತುಂಬಾ ಕೋಪಬಂತು. ಇನ್ನೇನು ಬಲಿ ಕೊಡಬೇಕು ಅಷ್ಟರಲ್ಲಿ ಪೂಜಾರಿ ಬಂದ ಈ ರಾಜನಿಗೆ ಕೈಬೆರಳು ಗಾಯವಾಗಿದೆ, ಇವನು ಬಲಿಗೆ ಯೋಗ್ಯನಲ್ಲ ಎಂದು ರಾಜನನ್ನು ಬಿಡುಗಡೆ ಮಾಡಿದರು. ಆಗ ಮಂತ್ರಿ ಹೇಳಿದ

ಅದೇ ಮಾತು ನಿಮ್ಮ ಕೈಬೆರಳು ಗಾಯವಾಗದಿದ್ದರೆ ನಿಮ್ಮನ್ನು ಬಲಿ ಕೊಡುತ್ತಿದ್ದರು. ಅನುಭವಿಸಿದ ಎಲ್ಲಾ ಘಟನೆಗಳಿಂದ ಒಳ್ಳೆಯದೇ ಆಗಿದೆ. ಅಂತೆಯೇ ಶ್ರೀ ಶ್ರೀಗಳವರು "ಕಾಯಕವೇ ಕೈಲಾಸ" ಎಂಬ ಬಸವೇಶ್ವರರ ವಾಣಿಯನ್ನು ಕೃತಿಯಲ್ಲಿ ತೋರಿಸಿ ನಾಡಿನ 5,000 ವಿದ್ಯಾರ್ಥಿಗಳಿಗೆ ಆಶ್ರಯನೀಡಿದ್ದಾರೆ. ಸರ್ವರನ್ನೂ ಸಮಾನತೆಯಿಂದ ಕಾಣುವ ಪುಣ್ಯ ಮೂರ್ತಿಯಾಗಿದ್ದಾರೆ. ಸತ್ಯ, ಪ್ರಾಮಾಣಿಕತೆ, ವ್ಯಾಸಂಗದಲ್ಲಿ ಶ್ರದ್ಧೆ, ಕಷ್ಟಸಹಿಷ್ಣುತೆ, ದೇಶಪ್ರೇಮ ಮತ್ತು ಎಲ್ಲಾ ಮಾನವೀಯ ಗುಣಗಳನ್ನು ಬೆಳೆಸಿಕೊಳ್ಳಬೇಕೆಂದು ವಿದ್ಯಾರ್ಥಿಗಳಿಗೆ ಒತ್ತಿ ಹೇಳಿದರು.

ಅಧ್ಯಕ್ಷತೆ ವಹಿಸಿದ್ದ ಸಾ.ಶಿ.ಇ. ಸಹನಿರ್ದೇಶಕರಾದ ಶ್ರೀ ಆರ್.ಹೆಚ್. ಕಾನಡೆಯವರು ವಿದ್ಯಾರ್ಥಿ ಸಂಘ ಪ್ರತಿಭೆಯ ಬೆಳವಣಿಗೆಗೆ ಮಾಧ್ಯಮವಾಗಿದೆ ಎಂದು ಹೇಳಿ ಶಿಕ್ಷಕರು ಇದಕ್ಕಾಗಿ ರಚನಾತ್ಮಕ ಚಟುವಟಿಕೆಗಳನ್ನು ರೂಪಿಸಬೇಕು. ಇಂದಿನ ಸ್ಪರ್ಧಾ ಜಗತ್ತಿನಲ್ಲಿ ವಿದ್ಯೆಗಾಗಿ ಜಾತಿ ಮತ ಭೇದವಿಲ್ಲದೆ ಎಲ್ಲರಿಗೂ ಸಮಾನ ಅವಕಾಶ ಕಲ್ಪಿಸಿರುವುದು ಶ್ರೀಮಠದ ವೈಶಿಷ್ಟ್ಯವಾಗಿದೆ ಎಂದು ಶ್ಲಾಘಿಸಿದರು.

**ಶ್ರೀ ಶ್ರೀಗಳವರ ಆಶೀರ್ವಚನ:–** ಶಿಕ್ಷಣ ವ್ಯಕ್ತಿಯ ಪರಿಪೂರ್ಣ ಬೆಳವಣಿಗೆ. ದೇಹ, ಬುದ್ಧಿ, ಆತ್ಮ, ಪ್ರತಿಭೆ, ವ್ಯಕ್ತಿತ್ವದ ವಿಕಾಸಕ್ಕೆ ಅವಕಾಶವಾಗಬೇಕು. ಮನುಕುಲಕ್ಕೆ ಭರತಖಂಡ ಅಮೋಘ ಕಾಣಿಕೆ ಕೊಟ್ಟಿದೆ. ಜಗತ್ತಿನ ಮೇಲ್ಮೆಗೆ ಕೊಡುಗೆ ನೀಡಬೇಕಾಗಿದೆ. ಇಂದಿನ ಸಾಮಾಜಿಕ ಚಿತ್ರ, ದೇಶದ ಪರಿಸ್ಥಿತಿ ಉತ್ತಮವಾಗಿಲ್ಲ! ಇವನ್ನು ಪರಿಹರಿಸಲು ವಿದ್ಯಾರ್ಥಿಗಳು ಚಿಂತನೆ ಮಾಡಬೇಕು.

ಎಲ್ಲರು ತಮ್ಮ ಭವಿಷ್ಯವನ್ನು ರೂಪಿಸಿಕೊಳ್ಳಲು ದೇವನ ಅಂಶ ಅಂತರ್ಗತವಾಗಿದೆ. ಹಣೆಬರಹ, ಅದೃಷ್ಟ ಎಂಬ ಪದಗಳಲ್ಲಿ ಹುರುಳಿಲ್ಲ. ಮನಸ್ಸಿನ ಏಕಾಗ್ರತೆ ಜ್ಞಾನಾರ್ಜನೆಗೆ ಮುಖ್ಯ. ಅಭ್ಯಾಸಕ್ಕೆ ಸಾಧನೆಬೇಕು. ಆತ್ಮವಿಶ್ವಾಸದ ಕೊರತೆಯುಂಟಾದರೆ ಪ್ರಗತಿ ಕುಂಟಿತವಾಗುತ್ತದೆ.

---

ನಾನೆಂಬುದೊಂದಂಶವಿತರ ಜಗವೊಂದಂಶ
ನಾನು ನೀನುಗಳಳಿದ ಸರ್ವೈಕ್ಯವೊಂದು
ಧ್ಯಾನಿಸುತ್ತೈಕ್ಯನನು ಪಾಲಿಸುವುದುಭಯವನು
ಜಾಣನಾ ನಾಟಕವು – ಮಂಕುತಿಮ್ಮ ॥

–ಡಿ.ವಿ.ಜಿ.

# ಹೂವಾಗಿ ಅರಳಿದರು



ಎಂಟು ವರ್ಷಗಳ ಹಿಂದೆ ಎಂದುಕಾಣುತ್ತದೆ. ಮಿತ್ರರಾದ ಶ್ರೀ ಎಂ. ಮಲ್ಲವೀರಯ್ಯನವರ ಜೊತೆ ಬೆಂಗಳೂರಿಗೆ ಹೋಗಿದ್ದೆ. ಶ್ರೀಮಠದ ಸಮಾರಂಭದ ಆಹ್ವಾನಪತ್ರಿಕೆಗಳನ್ನು ವಿತರಿಸುವ ಸಂದರ್ಭ, ಬೆಂಗಳೂರಿನಲ್ಲಿ ಅನೇಕ ಗಣ್ಯರಿಗೆ, ಭಕ್ತಾದಿಗಳಿಗೆ ಆಹ್ವಾನಪತ್ರಿಕೆ ಮುಟ್ಟಿಸುತ್ತಾ ಮಿತ್ರರಾದ ಮಲ್ಲವೀರಯ್ಯನವರು ಹಿಂತಿರುಗುವ ವೇಳೆಯಲ್ಲಿ ಮರೆತಿದ್ದ ಮನೆಯೊಂದನ್ನು ಜ್ಞಾಪಿಸಿ ಕೊಂಡರು. ಮತ್ತೆ ಹಿಂದಕ್ಕೆಹೊರಟೆವು. ಕೆಂಗಲ್ ಹನುಮಂತಯ್ಯ ರಸ್ತೆ-ಯಲ್ಲಿ ನಾವಿದ್ದ ವಾಹನಓಡಿತು. ಮಲ್ಲವೀರಯ್ಯನವರು ಮನೆಯೊಂದರ ಮುಂದೆ ವಾಹನ ನಿಲ್ಲಿಸಲು ಸೂಚಿಸಿದರು. ವಾಹನ ನಿಂತಿತು. ದೊಡ್ಡಮನೆ, ಮಹಡಿಯುಳ್ಳದ್ದು. ಒಳಗೆ ಹೋದೆವು. "ಬನ್ನಿ ಬನ್ನಿ ಸ್ವಾಮಿಗಳು ಆರೋಗ್ಯವಾಗಿದ್ದಾರಾ, ಯಾವಾಗ ಬಂದದ್ದು ? ಏನು ಅಪ್ಪಣೆ ತಂದಿದ್ದೀರಿ" ಎನ್ನುತ್ತಾ ಎಪ್ಪತ್ತು ಎಪ್ಪತ್ತೈದುವರ್ಷದ ಹಿರಿಯರೊಬ್ಬರು ಸ್ವಾಗತಿಸಿದರು. " ನಿಮ್ಮ ಆರೋಗ್ಯ ಹೇಗಿದೆ ? ಮಠದ ಕಡೆ ಬರಲೇ ಇಲ್ಲವಲ್ಲಾ ? ಶ್ರೀ ಶ್ರೀಗಳು ನೋಡಿಕೊಂಡು ಬಾ ಎಂದಿದ್ದಾರೆ. ಆಹ್ವಾನಪತ್ರಿಕೆ ಬೇರೆ ನಿಮಗೆ ಕೊಡಬೇಕಾಗಿತ್ತು " ಎಂದರು ಎಂ.ಎಂ. ಕೂತ್ಕೊಳ್ಳಿ ಕಾಫಿ ಕುಡಿಯೋಣ ಎಂದರು. ನಾನು ಸೂಕ್ಷ್ಮವಾಗಿ ನೋಡುತ್ತಲೇ, ಹಿಂದೆ ಎಷ್ಟೊಂದು ವಿನಯ ! ಎಂಥ ಹಿರಿತನ ! ನಡೆ-ನುಡಿಯಲ್ಲಿ ಎನ್ನಿಸಿತು. ಅವರ ಆರೋಗ್ಯ ಸುಧಾರಿಸುತ್ತಿರುವಂತೆ ಕಾಣಿಸಿತು. ಸ್ವಾಮಿಗಳ ಬಗ್ಗೆ ತುಂಬಾ ಮಾತಾಡಿದರು. ದೇವರಪ್ಪಾ ಅವರು ದೇವರು ಎಷ್ಟು ಜನ್ಮದ ಪುಣ್ಯವೋ ಅಂಥವರ ದರ್ಶನಾಶೀರ್ವಾದ ಲಭ್ಯವಾಗುವುದು " ಎನ್ನುತ್ತ ಮಾತು ಮುಂದುವರೆಸಿದರು. ಅವರ ಮಾತಿನಲ್ಲಿ ಎದ್ದು ಕಾಣುತ್ತಿದ್ದುದು ಅಪಾರಭಕ್ತಿ ದಾನಧರ್ಮದ ಮಹತ್ವ. ದುಡಿಮೆಯ ಗುಟ್ಟು. ಶ್ರೀಮಂತಿಕೆ ಚಿರಂತನವಾದುದಲ್ಲ ಎಂಬುದಾಗಿತ್ತು. ಎಂ ಎಂ. ರವರು " ನಿಮ್ಮಂಥವರು ಶ್ರೀಮಠಕ್ಕೊಂದು ಆಸ್ತಿ ಇದ್ದಂತೆ " ಎಂದರು. " ಏನು ಮಾತು ನಿಮ್ಮದು ! ಸ್ವಾಮಿಗಳ ಮುಂದೆ ನಾವೆಲ್ಲ ಎಷ್ಟು ? ನಮ್ಮದುಯಾವ ಘನಸೇವೆ " ಎಂದೇ ವಿನಯವಾಡಿದರು. ಮೃದುವಾದ ಮಾತುಗಳು. ಹಿತವಾದಆತಿಥ್ಯ ಬರೋಣವೇ ಎಂದರು ಎಂ.ಎಂ. ಆಹ್ವಾನಪತ್ರಿಕೆ ಕೊಟ್ಟೆವು. "ತಪ್ಪದೆ ಬನ್ನಿ "ಎಂದೆವು. ಆಗಲಿ, ಬರುವೆ ಎಂದರು.

ಇನ್ನೊಮ್ಮೆ ಶ್ರೀಮಠದಲ್ಲಿ ಅವರನ್ನು ಕಂಡೆ. ಯಾವುದೋ ಸಮಾರಂಭ. ಪೂ
ಶ್ರೀಗಳ ಮುಂದೆ ಬಹಳ ಭಕ್ತಾಧಿಗಳು. ನಾಕಂಡ ಹಿರಿಯರು ಹಿಂದೆ ಸರಿದು ನಿಂತಿದ್ದ
ಮುಂದೆ ಬನ್ನಿ. ಎಂದರು ಸ್ವಾಮಿಗಳು. ಅವರೆಲ್ಲರ ಸರದಿ ಮುಗಿಯಲಿ ಎಂದರವರು
ಕೊನೆಗೆ ಪೂಜ್ಯಪಾದರ ಶ್ರೀ ಚರಣಗಳಲ್ಲಿ ಕಾಣಿಕೆಯಿಟ್ಟು ನಮಸ್ಕರಿಸಿ ನಿಂತರು
ಕೂತ್ಕೊಳ್ಳಿ ಎಂದರು ಸ್ವಾಮಿಗಳು. ಹಿರಿಯರು ನಿಂತೇ ಇದ್ದರು. ಪರಸ್ಪರ ಮಾತು
ಕಥೆಗಳು ನಡೆದವು. ಅವರು ಕೂರಲೇ ಇಲ್ಲ. ಶ್ರೀಗಳವರಿಗೆ ಪುನಃ ನಮಿಸಿ ಹೊ
ಬಂದರು. ಅದಾದ ನಂತರ ಆ ಹಿರಿಯರನ್ನು ಅನೇಕಬಾರಿ ಶ್ರೀಮಠದಲ್ಲಿ ಕಂಡಿದ್ದೇನೆ
ಅವರ ನಡೆ-ನುಡಿಗಳನ್ನು ಗಮನಿಸಿದ್ದೇನೆ. ಹೂವಿನಂತೆ ಅವರು ಬರುತ್ತಿದ್ದರು
ಹಿಂತಿರುಗುತ್ತಿದ್ದರು. ದಿನಾಂಕ 5.6.92ರ ಶುಕ್ರವಾರ ಮುಂಜಾನೆ ಅಂಥ ಹಿರಿಯ
ನಡೆನುಡಿಯ ಸಂಭಾವಿತರು ಶಿವನಡಿಗೆ ಹೂವಾದರು ಎಂಬುದನ್ನು ಕೇಳಿ ಕಣ್ಣು
ತೇವವಾದವು. ಪೂಜ್ಯ ಶ್ರೀಗಳನ್ನು ಕಾಣಲೆಂದು ಹೋದೆ. "ಗೊತ್ತಾಯಿತು
ಮರಿಸ್ವಾಮಪ್ಪನವರು ಶಿವನಪಾದ ಸೇರಿದರಂತೆ" ಎಂದರು, ಪೂಜ್ಯಪಾದರು. ಸುಮ್ಮ
ನಿಂತುಬಿಟ್ಟೆ. ಶ್ರೀಗಳವರು ಮರಿಸ್ವಾಮಪ್ಪನವರಿಗೂ ಶ್ರೀಮಠಕ್ಕೂ ಬೆಳೆದು ಬಂದ
ಅನನ್ಯ ಬಾಂಧವ್ಯವನ್ನು ನೆನೆಸಿಕೊಂಡರು. ಅವರ ಸದ್ಗುಣಗಳನ್ನು ತಿಳಿಸಿದರು.
ಮುಕ್ತಮನಸ್ಸು ಮರಿಸ್ವಾಮಪ್ಪನವರದು ಎಂದರು. ಅಂತೆಯೇ ಪ್ರಸಂಗವೊಂದನ್ನು
ಹೇಳಿದರು. ಅವರ ಬಂಧುವರ್ಗದವರೊಬ್ಬರು ಮರಿಸ್ವಾಮಪ್ಪನವರಿಗೆ ಹೇಳಿದರಂತೆ.
ನೀವೇಕೆ ಸಿದ್ಧಗಂಗಾಮಠಕ್ಕೆ ಮೇಲಿಂದಮೇಲೆ ದಾನಮಾಡುತ್ತೀರಿ. ನಮ್ಮ ಸಮಾಜದ
ಮಠವಿರುವಾಗ ಎಂದರಂತೆ. ಅದಕ್ಕೆ ಮರಿಸ್ವಾಮಪ್ಪನವರು "ಇಂಥ ಮಾತಾಡಬೇಡಿ
ನನಗೆ ಸಿದ್ಧಗಂಗಾಮಠವೂ ಒಂದೆ ನಮ್ಮಸಮಾಜದ ಮಠವೂ ಒಂದೇ ಯಾವವ್ಯತ್ಯಾ-
ಸವೂ ನನಗೆ ಕಾಣುತ್ತಿಲ್ಲ. ಅಲ್ಲಿಯೂ ಬಡಬಗ್ಗರ ಸೇವೆ ನಡೆದಿದೆ. ಇಲ್ಲಿಯೂ ನಡೆದಿದೆ
ಅಲ್ಲದೆ ಸಿದ್ದಗಂಗಾಮಠದ ಸ್ವಾಮಿಗಳಂಥವರು ಎಷ್ಟುಜನ ಸ್ವಾಮಿಗಳು ಸಿಕ್ಕುತ್ತಾರೆ
ಹೇಳಿ-ಎಂದು ತರಾಟೆಗೆ ತೆಗೆದುಕೊಂಡರಂತೆ. ಮರಿಸ್ವಾಮಪ್ಪನವರು ಇದನ್ನು ತಿಳಿಸಲಿ
ಅವರ ಮಿತ್ರರೊಬ್ಬರು ಇದನ್ನು ತಿಳಿಸಿದರು. ಎಂದರು ಶ್ರೀಗಳು. ಮನಸ್ಸಿನಲ್ಲಿಯೇ
ದೊಡ್ಡವರ ಗುಣ ಎಂದುಕೊಂಡೆ.

ಪರಮಪೂಜ್ಯ ಶ್ರೀ ಶ್ರೀಗಳವರ ಜನ್ಮದಿನಾಚರಣೆಯ ಸಂದರ್ಭದಲ್ಲಿ ಸಮಾಜಕ್ಕೆ
ಸೇವೆ ಸಲ್ಲಿಸಿದ ಗಣ್ಯರನ್ನು ಸನ್ಮಾನಿಸುವ ವಿಚಾರ ಬಂದಾಗ ಮಿತ್ರರಾದ ಶ್ರೀ ಪುಟ್ಟ
ಶಂಕರಯ್ಯನವರು ಮರಿಸ್ವಾಮಪ್ಪನವರ ಹೆಸರನ್ನು ಸೂಚಿಸಿದರು. ಎಲ್ಲರಿಗೂ ಒಪ್ಪಿಗೆ-
ಯಾಯಿತು. ಪೂಜ್ಯ ಶ್ರೀ ಶ್ರೀಗಳವರಿಗೂ ಸಮ್ಮತಿಯಾಯಿತು. ಆದರೆ ಸನ್ಮಾನದ
ವಿಷಯಕ್ಕೆ ಮರಿಸ್ವಾಮಪ್ಪನವರನ್ನು ಒಪ್ಪಿಸುವುದೇ ಕಷ್ಟವಾಯಿತು. "ಪೂಜ್ಯ ಶ್ರೀಗಳ
ಆಶೀರ್ವಾದ ಸಾಕು ಇದೆಲ್ಲಾ ನನಗೆಬೇಡ" ಎಂದರು ಸ್ವಾಮಿಗಳೇ ಸಂತೋಷದಿಂದ
ಕಳುಹಿಸಿದ್ದಾರೆ' ಎಂದಾಗ ನನ್ನ ಜನ್ಮ ಸಾರ್ಥಕವಾಯಿತು. ಎಂದು ಸಮ್ಮತಿಸಿದರು,

ಮರಿಸ್ವಾಮಪ್ಪನವರಿಗೆ ಆಡಂಬರ, ಔಪಚಾರಿಕತೆ, ಪ್ರದರ್ಶನಗಳು, ಹಿಡಿಸುತ್ತಿರಲಿಲ್ಲ, ಅವರು ಬೆಳೆದು ಬಂದದ್ದೇ ಹಾಗೆ.

ಗ್ರಾಮೀಣ ಕುಟುಂಬದಲ್ಲಿ ಕುಡಿಯೊಡೆದ ಕರುಣಾಳು ಮರಿಸ್ವಾಮಪ್ಪನವರು. ಬಡತನದ ನೇರ ಪರಿಚಯವಿದ್ದ ಹೃದಯವಂತರ ಸಂಸಾರದಲ್ಲಿ ಬೆಳೆದು ಬಂದರು. ಯಲಹಂಕದ ಶ್ರೀಮುನಿಯಪ್ಪನವರ ಮಕ್ಕಳು, ತಾಯಿ ಶ್ರೀಮತಿ ಮುನಿಯಮ್ಮನವರು. ಸನ್ಮಾರ್ಗ ಪ್ರವರ್ತಿಗಳು. ಕಲಿತವಿದ್ಯೆಯನ್ನು ಬಡಮಕ್ಕಳಿಗೆ ಆಶ್ರಯನೀಡಿ ಕಲಿಸಿದ ಪುಣ್ಯಾತ್ಮರು. ಮರಿಸ್ವಾಮಪ್ಪನವರು ಕಲಿತದ್ದು ಅಧ್ಯಾಪಕರೊಬ್ಬರ ಮನೆಯಲ್ಲಿ ಆ ಮನೆಯ ಕೆಲಸ ಬೊಗಸೆಗಳಲ್ಲಿ ದುಡಿಯುತ್ತ, ಶ್ರಮದ ಬದುಕಿಗೆ ಬಾಲ್ಯದಲ್ಲಿಯೇ ತಮ್ಮನ್ನು ಒಗ್ಗಿಸಿಕೊಂಡರು. ತಂದೆತಾಯಿಗಳು ಶಿವಾಧೀನವಾದಮೇಲೆ ಬೆಂಗಳೂರಿಗೆ ಕೈಯ್ಯ ಲ್ಲಿಕರ್ನೆ ಹಿಡಿದು ಗಾರೆಕೆಲಸದ ಕೂಲಿಯಾಗಿ ಬಂದರು, ದುಡಿದರು, ಸಿಹಿ-ಕಹಿಗಳನ್ನುಂಡರು, ಬಡತನದ ಮೂಲೆ ಮೊಡಕುಗಳನ್ನು ಪರಿಚಯಿಸಿಕೊಂಡರು. ಸಹಕೂಲಿಗಳೊಂದಿಗೆ ಹಿತವಾಗಿ ಮಾದರಿಯಾಗಿ 'ಮರಿಸ್ವಾಮಿ' ಗಳೆಂಬಂತೆ ನಡೆದು ಕೊಂಡರು, ಯಾರೊಬ್ಬರೊಂದಿಗೂ ವೈರ ಕಟ್ಟಿಕೊಳ್ಳಲಿಲ್ಲ, ಸ್ನೇಹಬೆಳೆಸಿದರು ಕಷ್ಟದ ಲ್ಲಿರುವವರನ್ನು ಕಂಡಾಗ ಕೈಲಿದ್ದುದನ್ನುಕೊಟ್ಟು ಕಣ್ಣೀರೊರೆಸಿದರು. ಸಮಾಧಾನದ ಮಾತಾಡಿದರು' ಹಿರಿಯರು ಬಾಳಿದ ರೀತಿಯನ್ನು ತಿಳಿಸಿ ಹೇಳಿದರು. ಉಪ್ಪುಸೊಪ್ಪು ಗಳನ್ನು ಗಳಿಸುವ ಕಲೆಯನ್ನು ಮೈಗೂಡಿಸಿಕೊಂಡರು. ಐಷಾರಾಮದ ಬದುಕಿಗೆ ಬೆನ್ನುಮಾಡಿದರು. ಗಳಿಸಿದುದನ್ನು ದಾನ ಧರ್ಮಗಳಿಗೆ ವಿನಿಯೋಗಿಸುತ್ತಾ ನಡೆದರು. ಮೆಲ್ಲ ಮೆಲ್ಲನೆ ಮೇಲೇರಿದರು, ಕಂಟ್ರಾಕ್ಟರರಾದರು, ಕೊನೆಗೆ ಪ್ರಥಮದರ್ಜೆಯ ಕಂಟ್ರಾಕ್ಟರರಾದರು ಸಮಾಜದಲ್ಲಿ ಗಣ್ಯರೆನ್ನಿಸಿಕೊಂಡರು, ಆದರೆಂದೂ ಗರ್ವಿಗಳಾಗ ದಂತೆ ನಡೆದುಕೊಂಡು ಮಾದರಿಯೆನಿಸಿದರು.

ಮರಿಸ್ವಾಮಪ್ಪನವರಿಂದ ಉಪಕೃತವಾದ ಮಠಗಳು, ಸೇವಾಸಂಸ್ಥೆಗಳು, ದೇವಾ ಲಯಗಳು ಅನೇಕ. ವಿದ್ಯಾರ್ಥಿನಿಲಯಗಳು ಹಲವು. ಅವರ ಉಪಕಾರ ಬುದ್ಧಿ ಒಂದು ಜಾತಿಗೆ, ಕೋಮಿಗೆ, ಸ್ಥಳಕ್ಕೆ ಸೀಮಿತವಾಗಲಿಲ್ಲ ಅರ್ಹ, ಯೋಗ್ಯವೆಂದು ಕಂಡುಬಂದ ಎಲ್ಲವಕ್ಕೂ ಉದಾರವಾಗಿ ನೀಡಿದರು-ನೀಡುವಲ್ಲಿ ಸಂತೋಷಕಂಡರು. ಶ್ರೀ ರಾಮಕೃಷ್ಣಮಠ, ಸುತ್ತೂರುಮಠ, ಸಿದ್ಧಗಂಗಾಮಠ, ಆದಿಚುಂಚನಗಿರಿಮಠ ಗಳಿಗೆ ಅವರ ಸೇವೆ ಸಂದಿದೆ. ಅಂತೆಯೇ ಕುಡ್ಲೂರು, ಕೊಣನೂರು ದೇವಾಲಯಗಳಿಗೆ ಬೂದಿಗೆರೆ, ವಿಲ್ಸನ್‌ಗಾರ್ಡನ್‌ಗಳ ಆಸ್ಪತ್ರೆಗಳಿಗೆ, ಕನಕಪುರ, ತುಮಕೂರುಗಳ ವಿದ್ಯಾರ್ಥಿ ನಿಲಯಗಳಿಗೆ, ರಾಜಾಜಿನಗರ ರಾಜರಾಜೇಶ್ವರಿ ಕಲ್ಯಾಣ ಮಂಟಪಕ್ಕೆ, ಅಲಸೂರಿನ ಸೋಮೇಶ್ವರ ಮತ್ತು ಆಂಜನೇಯಸ್ವಾಮಿ ದೇಗುಲಗಳಿಗೆ ಮುಕ್ತ ಹಸ್ತ ದಿಂದ ದಾನಮಾಡಿ ಧನ್ಯರಾಗಿದ್ದಾರೆ ಮರಿಸ್ವಾಮಪ್ಪನವರು. ಬಲಗೈಲಿ ಕೊಟ್ಟದ್ದು

ಎಡಗೈಗೆ ಗೊತ್ತಾಗಬಾರದು ಎಂಬ ಮನೋಧರ್ಮದ ಮರಿಸ್ವಾಮಪ್ಪನವರು ಬಡ ಬಗ್ಗರಿಗೆ ನೀಡಿ ನಿಜದಹಾದಿಯಲ್ಲಿ ಸಾಗಿದರು.

ಪ್ರಶಸ್ತಿ, ಪ್ರಶಂಸೆಗಳಿಂದ ಸದಾದೂರವಿದ್ದರು ಮರಿಸ್ವಾಮಪ್ಪನವರು. ಆದರೆ ಸಮಾಜ, ಸರ್ಕಾರ, ಸೇವಾಸಂಸ್ಥೆಗಳು, ಮಠಮಾನ್ಯಗಳು ಅವರನ್ನು ಪುರಸ್ಕರಿಸಿದುವು. ರಾಜ್ಯಪ್ರಶಸ್ತಿ 1966ರಲ್ಲಿ ಪಡೆದರು "ಧರ್ಮಸೇವಾಸಕ್ತ" ರೆಂದು ಆದಿಚುಂಚನಗಿರಿ ಪೂಜ್ಯ ಜಗದ್ಗುರು ಶ್ರೀ ಶ್ರೀಗಳವರಿಂದ ಗೌರವಕ್ಕೆಪಾತ್ರರಾದರು. ಸುತ್ತೂರು ಮಠದಜಗದ್ಗುರುಗಳು "ಧರ್ಮಕಾರ್ಯಪ್ರವೀಣ"ನೆಂದು ಗೌರವಿಸಿದರು. "ಧರ್ಮಸೇವಾ ಧುರಂಧರ"ರೆಂದು ದ್ವಾರಕಾಪೀಠದ ಜಗದ್ಗುರುಗಳಿಂದ ಸನ್ಮಾನಿತರಾದರು. ಪ್ರತಿಷ್ಠಿತರಿಂದ ಪ್ರಶಂಶಿತರಾದರು' ಸನ್ಮಾನಿತರಾದರು, ಶ್ರೀ ಸಿದ್ಧಗಂಗಾಮಠದ ಪೂಜ್ಯ ಶ್ರೀಗಳವರಿಂದ "ನಿಷ್ಕಪಟ ಹೃದಯರತ್ನ" ರೆನ್ನಿಸಿಕೊಂಡರು.

ಶ್ರೀಮರಿಸ್ವಾಮಪ್ಪನವರು ಎಂಬತ್ತೊಂದುವರ್ಷದ ತುಂಬುಜೀವನ ನಡೆಸಿದರು. ಜನನ 20-12-1910. ಶಿವಾಧೀನ 5-6-1993) ಧರ್ಮಪತ್ನಿ ಶ್ರೀಮತಿ ನಂಜಮ್ಮನವರು ಪತಿಯನ್ನು ಅರ್ಥಮಾಡಿಕೊಂಡು ನಡೆದ ಸದ್ಗೃಹಿಣಿ . ಒಬ್ಬಮಗ ಇಬ್ಬರುಹೆಣ್ಣು ಮಕ್ಕಳು ಮರಿಸ್ವಾಮಪ್ಪನವರಿಗೆ. ಆದರೆ ಕಟ್ಟಿಕೊಂಡ ಬಂಧು-ಬಳಗ ಅಪಾರ. "ಮಂದಿ ಮಕ್ಕಳೊಳಗೆ ಚೆಂದಾಗಿರಬೇಕು" ಎಂಬ ಹಳ್ಳಿಗರ ಮಾತಿಗೆ ಪ್ರತ್ಯಕ್ಷ ಉದಾಹರಣೆಯಾಗಿದ್ದು ಶಿವನ ಶ್ರೀಚರಣದಲ್ಲಿ ಹೂವಾಗಿ ಅರಳಿದರು ಹಿರಿಯರು.

ಶ್ರೀ ಮರಿಸ್ವಾಮಪ್ಪನವರ ನಿಧನವಾರ್ತೆಯನ್ನು ಕೇಳಿದ ಶ್ರೀಸಿದ್ಧಗಂಗಾ ಪೂಜ್ಯಪಾದರು ಸುಸಂಸ್ಕೃತ ವ್ಯಕ್ತಿಯೊಬ್ಬರು ಕಣ್ಮರೆಯಾದರು ಎನ್ನುತ್ತ ಅವರ ಅಗಲಿಕೆ ಲೋಕಕ್ಕೆ ನಷ್ಟ ಎಂದು ಶ್ರೀಯುತರ ಆತ್ಮಕ್ಕೆ ಶಾಂತಿ ಬಯಸಿ ಕುಟುಂಬ ವರ್ಗದವರಿಗೆ ಸಂತಾಪ ವ್ಯಕ್ತಪಡಿಸಿದ್ದಾರೆ.

---

ಹುಲ್ಲಾಗು ಬೆಟ್ಟದಡಿ, ಮನೆಗೆ ಮಲ್ಲಿಗೆಯಾಗು
ಕಲ್ಲಾಗು ಕಷ್ಟಗಳ ಮಳೆಯ ವಿಧಿ ಸುರಿಯೆ
ಬೆಲ್ಲ ಸಕ್ಕರೆಯಾಗು ದೀನ ದುರ್ಬಲರಿಂಗೆ
ಎಲ್ಲರೊಳಗೊಂದಾಗು - ಮಂಕುತಿಮ್ಮ.

—ಡಿ.ವಿ.ಜಿ.

## ತಲೆಯ ಮೇಲೊಂದು ಸೂರು

"ಆಶ್ರಯ" ಹೆಸರೇ ಹೇಳುವಂತೆ ಜನತೆಗೆ ನೆಲೆ ನೀಡುವ ಯೋಜನೆ. ಆಶ್ರಯ ಯೋಜನೆಯಲ್ಲಿ ಕರ್ನಾಟಕ ಸರ್ಕಾರ ರಾಜ್ಯದಾದ್ಯಂತ ಭೂರಹಿತ ಮತ್ತು ನಿವೇಶನ ರಹಿತರಿಗೆ ಐದು ಲಕ್ಷಕ್ಕೂ ಹೆಚ್ಚು ನಿವೇಶನಗಳನ್ನು ಹಂಚಿದೆ. ಇದಲ್ಲದೆ ಬೆಂಗಳೂರು ನಗರದ ಕೊಳಚೆ ನಿವಾಸಿಗಳಿಗೆ 30,000 ಮನೆಗಳನ್ನು ಹಾಗೂ ರಾಜ್ಯದ ಇತರ ಪಟ್ಟಣ ಪ್ರದೇಶಗಳ ಜನರಿಗೆ 30,000 ಮನೆಗಳನ್ನು ನಿರ್ಮಿಸಲಾಗುತ್ತಿದೆ. ಡಾ|| ಅಂಬೇಡ್ಕರ್ ಶತಮಾನೋತ್ಸವದ ಅಂಗವಾಗಿ ರಾಜ್ಯದ ಪ್ರತಿಯೊಂದು ಬ್ಲಾಕ್‌ನಲ್ಲೂ 1000 ಮನೆಗಳು ಬರಲಿವೆ.

## ಆರಾಧನ

ದುರ್ಬಲ ವರ್ಗದ ಜನರು ಅಧಿಕವಾಗಿರುವ ಪ್ರದೇಶಗಳಲ್ಲಿರುವ ಆರಾಧನ ಸ್ಥಳಗಳ ಪುನರುಜ್ಜೀವನ ಕಾರ್ಯವನ್ನು "ಆರಾಧನ" ಯೋಜನೆ ಕೈಗೊಂಡಿದೆ. ಇದುವರೆಗೆ ಈ ಉದ್ದೇಶಕ್ಕಾಗಿ ರಾಜ್ಯ ಸರ್ಕಾರ 5ಕೋಟಿ ಹಣವನ್ನು ಬಿಡುಗಡೆ ಮಾಡಿದೆ.

## ಅಭಿವೃದ್ಧಿ ಕಾರ್ಯಗಳಿಗೆ ಅಧಿಕ ವಿದ್ಯುತ್

ಅಭಿವೃದ್ಧಿ ಕಾರ್ಯಗಳಿಗೆ ಅಧಿಕ ವಿದ್ಯುತ್ ಪೂರೈಸುವ ಸಲುವಾಗಿ ಶಾಖೋತ್ಪನ್ನ ಮತ್ತು ಜಲವಿದ್ಯುತ್ ಯೋಜನೆಗಳನ್ನು ಸ್ಥಾಪಿಸುವ ಒಂದು ಬೃಹತ್ ಯೋಜನೆಯನ್ನು ರಾಜ್ಯಸರ್ಕಾರ ಸಿದ್ಧಪಡಿಸಿದೆ. ವಿದ್ಯುತ್ ಉತ್ಪಾದನೆ ಹಾಗೂ ಪೂರೈಕೆಗೆ ವಿದೇಶಿ ಸಂಸ್ಥೆಗಳೂ ಸೇರಿದಂತೆ ಖಾಸಗಿ ಕಂಪನಿಗಳು ಹಾಗೂ ಅನಿವಾಸಿ ಭಾರತೀಯರನ್ನು ರಾಜ್ಯಸರ್ಕಾರ ಆಹ್ವಾನಿಸಿದೆ. ವಿದ್ಯುತ್ ಕ್ಷೇತ್ರದ ಅಭಿವೃದ್ಧಿಗೆ ದೊಡ್ಡ ಪ್ರಮಾಣದ ವಿದೇಶೀ ಬಂಡವಾಳವನ್ನು ನಿರೀಕ್ಷಿಸಲಾಗಿದೆ.

## ಕೃಷಿ ಕ್ಷೇತ್ರಕ್ಕೆ ಒತ್ತಾಸೆ

ರಾಜ್ಯದಲ್ಲಿ ಕೃಷಿ ಕ್ಷೇತ್ರದ ಪ್ರಗತಿಗೆ ಪ್ರಥಮ ಪ್ರಾಶಸ್ತ್ಯ ನೀಡಲಾಗಿದೆ. ಕೃಷಿಕಾರ್ಯಗಳನ್ನು ಸುಧಾರಿಸಿ ಉತ್ಪಾದನೆಯನ್ನು ಅಧಿಕಗೊಳಿಸುವ ವಿವಿದೋದ್ದೇಶ ಹಾಗೂ ತೀವ್ರ ಕಾರ್ಯಕ್ರಮಗಳು ವ್ಯಾಪಕವಾಗಿ ಅನುಷ್ಠಾನಗೊಳ್ಳುತ್ತಿವೆ. ಇದಕ್ಕಾಗಿ ಕೊಡಮಾಡಿರುವ ಹಣ 153.32 ಕೋಟಿ ರೂಪಾಯಿ. ರಾಜ್ಯದ ನೀರಾವರಿ ಸಾಮರ್ಥ್ಯವನ್ನು ಗುರುತಿಸಿ ಬಳಸುವ ಕಾರ್ಯ ಮುನ್ನಡೆದಿದೆ. "ಕೆರೆ ಕಲ್ಯಾಣ" ಯೋಜನೆಯಲ್ಲಿ ಕೈಗೊಂಡಿರುವ ಕೆರೆಗಳ ದುರಸ್ತಿ ಮತ್ತು ಅಭಿವೃದ್ಧಿ ಸಣ್ಣ ನೀರಾವರಿ ಕೃಷಿಗೆ ನೆರವಾಗಿದೆ. ಬರ ಪರಿಹಾರ ಕಾಮಗಾರಿಗಳಿಗೆ 1991-92ರಲ್ಲೂ ರೂ 78 ಕೊಟಿ ವೆಚ್ಚಮಾಡಿದೆ 1992-93ರಲ್ಲಿ ಈವರೆಗೆ ರೂ. 14.56 ಕೊಟಿ ಬಿಡುಗಡೆ ಮಾಡಲಾಗಿದೆ.

## ಹಳ್ಳಿ ಹಳ್ಳಿಗೂ ಕುಡಿಯುವ ನೀರು

ರಾಜ್ಯದ ಪ್ರತಿಗ್ರಾಮಕ್ಕೂ ಈಗ ಕುಡಿಯುವ ನೀರು ಪೂರೈಸಲಾಗಿದೆ. ಕರ್ನಾಟಕ ಸರ್ಕಾರದ ಒಟ್ಟಾರೆ ಸಾಧನೆಗೆ ಯೋಜನಾ ಆಯೋಗವು ಮೆಚ್ಚುಗೆ ವ್ಯಕ್ತಪಡಿಸಿದೆ.

( 4ನೇ ರಕ್ಷಾಪುಟ ನೋಡಿ )

"SIDDAGANGA" MONTHLY Reg. No. KRNQ-9

## ಅಸಂಘಟಿತ ಕಾರ್ಮಿಕರಿಗೆ ಆಸರೆ

ಕರ್ನಾಟಕ ಸರ್ಕಾರವು ಕೈಗೆತ್ತಿಕೊಂಡಿರುವ "ಗುಂಪು ವಿಮಾಯೋಜನೆ" ಹಾಗೂ ಅಸಂಘಟಿತ ಕಾರ್ಮಿಕ ವರ್ಗಕ್ಕೆ ನೆರವಾಗುವ "ಕಲ್ಯಾಣ ನಿಧಿ" ಆಟೋರಿಕ್ಷಾ ಚಾಲಕರು, ಕ್ಷೌರಿಕರು, ಹಣ್ಣು ಹಂಪಲು, ಮಾರುವವರು, ಕೂಲಿಕಾರರು ಮುಂತಾದ ಅಸಂಘಟಿತ ದುಡಿಮೆಯ ಮಾರ್ಗಕ್ಕೆ ಸಾಮಾಜಿಕ ಭದ್ರತೆಯನ್ನು ಒದಗಿಸಿದೆ.

## ಹನಿ ನೀರು ಅಮೂಲ್ಯ

ಕ್ರಿ.ಶ. 2000ದ ಹೊತ್ತಿಗೆ ರಾಜ್ಯದ ಒಟ್ಟು ನೀರಾವರಿ ಸಾಮರ್ಥ್ಯದ 55ಲಕ್ಷ ಹೆಕ್ಟೇರ್ ಭೂಮಿಯನ್ನು ನೀರಾವರಿಗೊಳಪಡಿಸುವ ಗುರಿಯನ್ನು ಇಟ್ಟುಕೊಳ್ಳಲಾಗಿದೆ. ಈ ವರ್ಷ ನೀರಾವರಿ ಅಭಿವೃದ್ಧಿಗಾಗಿ 588 ರೂಪಾಯಿ ತೆಗೆದಿರಿಸಲಾಗಿದೆ.

ಅತಿ ವೇಗದಿಂದ ಕ್ಷೀಣಿಸುತ್ತಿರುವ ಪ್ರಾಕೃತಿಕ ಸಂಪನ್ಮೂಲವನ್ನು ಸಂರಕ್ಷಿಸುವ ಸಲುವಾಗಿ ಸರ್ಕಾರ ಕೈಗೊಂಡಿರುವ ಮತ್ತೊಂದು ವಿಶಿಷ್ಟ ಯೋಜನೆ 'ಹನಿತೆನೆ' ನೀರಿನ ಸಮರ್ಥ ಬಳಕೆಗಾಗಿ ಆಧುನಿಕ ನೀರಾವರಿ ಪದ್ಧತಿಯನ್ನು ಅಳವಡಿಸುವ ರೈತರಿಗೆ ಉತ್ತೇಜನ ನೀಡುವುದು "ಹನಿತೆನೆ" ಯೋಜನೆಯ ಗುರಿ.

## ಅಗತ್ಯ ವಸ್ತುಗಳ ಪೂರೈಕೆ

ರಾಜ್ಯದಾದ್ಯಂತ 17,795 ನ್ಯಾಯಬೆಲೆ ಅಂಗಡಿಗಳ ಮೂಲಕ ನಾಗರೀಕರಿಗೆ ಅಗತ್ಯವಸ್ತುಗಳನ್ನು ವಿತರಣೆ ಮಾಡಲಾಗುತ್ತಿದೆ. ಇವುಗಳಲ್ಲಿ 13,111 ನ್ಯಾಯಬೆಲೆ ಅಂಗಡಿಗಳು ಗ್ರಾಮೀಣ ಪ್ರದೇಶಗಳಲ್ಲೂ 4684 ಅಂಗಡಿಗಳು ಪಟ್ಟಣ ಪ್ರದೇಶಗಳಲ್ಲೂ ಕಾರ್ಯವೆಸಗುತ್ತಿದೆ. ರಾಜ್ಯದಲ್ಲಿ ಒಟ್ಟು 81,18,223 ಕುಟುಂಬ ಪಡಿತರ ಕಾರ್ಡುಗಳಿವೆ. ಇವುಗಳಲ್ಲಿ 58,18,223 ಕಾರ್ಡುಗಳು ಗ್ರಾಮೀಣ ಪ್ರದೇಶಗಳಲ್ಲೂ 22,92,821 ಕಾರ್ಡುಗಳು ಪಟ್ಟಣ ಪ್ರದೇಶಗಳಲ್ಲೂ ಇವೆ.

## ಗುಡ್ಡಗಾಡು ಜನರಿಗೆ ಪಡಿತರ ಪೂರೈಕೆ

ಗುಡ್ಡಗಾಡು ಜನರ ಮನೆಬಾಗಿಲಿಗೇ ಅಗತ್ಯ ವಸ್ತುಗಳನ್ನು ಪೂರೈಸುವ ಸಂಚಾರಿ ನ್ಯಾಯಬೆಲೆ ವಾಹನಗಳ ಏರ್ಪಾಡು ರಾಜ್ಯ ಸರ್ಕಾರ ಕೈಗೊಂಡಿರುವ ಮತ್ತೊಂದು ಮಾದರಿ ಕಾರ್ಯಕ್ರಮವಾಗಿದೆ.

## ಶಾಂತಿ ಸೌಹಾರ್ದ

ಮತೀಯ ಸೌಹಾರ್ದಕ್ಕೆ ಕರ್ನಾಟಕ ಹೆಸರಾದ ರಾಜ್ಯ. ಈ ಪರಂಪರೆಗೆ ಕುಂದು ಬರದಂತೆ ರಾಜ್ಯದಲ್ಲಿ ಶಾಂತಿ – ಸೌಹಾರ್ದತೆಯನ್ನು ಕಾಪಾಡಿಕೊಂಡು ಬರುವಲ್ಲಿ ಕರ್ನಾಟಕ ಸರ್ಕಾರ ಹೊಣೆಯರಿತು ಶ್ರಮಿಸುತ್ತಿದೆ.

ಭಾರತದ 46ನೆಯ ಸ್ವಾತಂತ್ರ್ಯ ದಿನದಂದು ರಾಷ್ಟ್ರಪಿತ ಮಹಾತ್ಮಗಾಂಧೀಜಿಯವರು ಕನಸು ಕಂಡ ಸದೃಢ ಮತ್ತು ಜ್ಯಾತ್ಯಾತೀತ ಸ್ವತಂತ್ರ ಭಾರತದ ಕಲ್ಪನೆಯನ್ನು ಕರ್ನಾಟಕ ಸರ್ಕಾರ ಸಕಾರಗೊಳಿಸುತ್ತಿದೆ. ಆದಕ್ಕೆ ರಾಷ್ಟ್ರ ನಿರ್ಮಾಣ ಕಾರ್ಯದಲ್ಲಿ ಸಮರ್ಪಣಾ ಭಾವದಿಂದ ಮುಂದುವರಿಯುತ್ತಿದೆ.

**ಬಡವರ ಮತ್ತು ದುರ್ಬಲ ವರ್ಗದವರ ಏಳಿಗೆಗೆ ಬದ್ಧ. ಕರ್ನಾಟಕಸಾಕಿ**

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ-572 104.